ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೫೫ ಜುಲೈ ೨೦೧೯ ಸಂಚಿಕೆ : ೦೭





ಶ್ರೀಮಠದಲ್ಲಿ ಶೈಕ್ಷಣಿಕ ಸಾಲಿನಲ್ಲಿ ವಿದ್ಯಾರ್ಥಿಗಳ ದಾಖಲಾತಿ ಸಂದರ್ಭದ ಒಂದು ನೋಟ.
ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ವಿದ್ಯಾರ್ಥಿಗಳ ಅರ್ಜಿಗಳನ್ನು ಪರಿಶೀಲಿಸಿ ಪ್ರವೇಶಕ್ಕೆ ಅನುಮತಿ ನೀಡುತ್ತಿರುವುದು.





ನಾಗರಬಾವಿ ಬಸವ ಬಳಗವು ಮೇ ೨೬ ರಂದು ಶ್ರೀಮಠದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ಏರ್ಪಡಿಸಿದ್ದ ಇಷ್ಟಲಿಂಗ ಪೂಜಾ ಕಾರ್ಯಕ್ರಮದಲ್ಲಿ ಭಾಗಿಯಾದ ಬಳಗದ ಸದಸ್ಯರು ಹಾಗೂ ಪದಾಧಿಕಾರಿಗಳು




ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಉಪಾಧ್ಯಕ್ಷರು

ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ಆರ್.ಎಸ್. ಮಲ್ಲೇಶಪ್ಪ
ಕೆ.ಬಿ. ಶಿವಶಂಕರಯ್ಯ

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.

ಮುದ್ರಕರು :
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್
ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ,
ತುಮಕೂರು-೫೭೨ ೧೦೪.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೩೨೨.


## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ



# ಸಿದ್ಧಗಂಗಾ

ಸಂಪುಟ : ೫೫ ಜುಲೈ ೨೦೧೯ ಸಂಚಿಕೆ : ೦೭

## ಒಳಪುಟಗಳಲ್ಲಿ ..................




ಚಂದಾ ವಿವರ : ವಾರ್ಷಿಕ ಚಂದಾ ರೂ. 200/-
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00

# ಸಂಪಾದಕೀಯ........

ಪರಮಪೂಜ್ಯ ಡಾ॥ ಶ್ರೀ ಶಿವಕುಮಾರ ಮಹಾಸ್ವಾಮಿಗಳು ೧೯೬೭ ರಂದು ಬಸವ ಜಯಂತಿ ಆಚರಣೆಯನ್ನು ಪ್ರಾರಂಭಿಸಿದರು. ಪೂಜ್ಯರಿಗೆ ಬಸವಣ್ಣನ ಬಗ್ಗೆ ಅಭಿಮಾನ, ಶ್ರದ್ಧೆ, ನಿಷ್ಠೆ. ಬಸವಣ್ಣ ಹೇಳುವಂತೆ **'ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು'** ಎಂಬ ಮಾತಿನಲ್ಲಿ ತುಂಬಾ ನಂಬಿಕೆ. ಹಾಗಾಗಿ ಶ್ರೀಗಳವರು ಬಸವಣ್ಣ ನೀನೊಂದು ವಿಸ್ಮಯ ಎಂದರು. ಮುಂದುವರಿದು ಈ ಲೋಕ ಕಂಡ ಅದ್ಭುತ ವಿಸ್ಮಯ, ಸಂಘಟನೆಯ ಬೀಜಮಂತ್ರ, ಕಾಯಕ ಸೂತ್ರದ ತಾಯಿ ಬೇರು. ದಾಸೋಹ ತತ್ತ್ವದ ಗಂಧ ಪರಿಮಳ, ಆಚಾರದ ಅರುಣಾಚಲ, ವಿಚಾರದ ವಿಂಧ್ಯಾಚಲ, ನಿರಹಂಕಾರದ ನೀಲಾಂಜನ, ಸ್ವಾಭಿಮಾನದ ಸ್ವರ್ಣಗೋಪುರ, ಮೃದುವಚನ ಸದುವಿನಯದ ಶ್ರೀಕಾರ, ಜಾತಿ ಜಾಡ್ಯಕೆ ವೈದ್ಯ ಭಾಸ್ಕರ, ದೀನದಲಿತರ ಕೊರಳ ರತ್ನಹಾರ, ಬಂಡಾಯದ ಬಾವುಟವನ್ನೆತ್ತಿದ ಪ್ರಥಮ ಹರಿಕಾರ, ಸಂಸಾರ ಸಾಗರದಿ ತೇಲಿ ಬಂದ ರಾಜಹಂಸ, ರಾಜಕಾರಣವ ಶುಭ್ರಗೊಳಿಸಿದ ಧೀರ ಮಂದಾರ, ಸ್ಥಾವರವನ್ನೆಲ್ಲ ಜಂಗಮಗೊಳಿಸಿದ ವೀರ ದಿನಕರ, **'ಒಲಿದಂತೆ ಹಾಡಿಹ'** ಕವಿರತ್ನ ಕ್ರಾಂತಿ ಚೈತ್ರ, ಅಹಿಂಸೆಯ ವರರೂಪವಾಗಿ, ಭಕ್ತಿ ಸಾಮ್ರಾಜ್ಯದ ಸತ್ಯ ಭಂಡಾರಿ, 'ಮಹಾಮನೆ'ಯ ಕಟ್ಟಿದ ದೇವರೂವಾರಿ, ಸಂಸಾರವ ಶಿವಯೋಗಗೊಳಿಸಿದ ಅಪೂರ್ವಯೋಗಿ, 'ಮರ್ತ್ಯದ ಕರ್ತಾರನ ಕಮ್ಮಟ'ವೆಂದ ಭೂಮಿಬಂಧು, 'ಪರವಧುವ ಮಹಾದೇವಿ' ಎಂದ ಶೀಲಸಿಂಧು, ಮೂಢನಂಬಿಕೆಗಳಿಗೆ ಸಿಡಿಲಾದ ಗುಂಡು, ಅನುಭವಕೆ ಅಡಿಗಲ್ಲನ್ನಿಟ್ಟ ಆಧ್ಯಾತ್ಮಶಿಲ್ಪಿ, ಇಷ್ಟಲಿಂಗ ಪ್ರಯೋಗಶಾಲೆಯಲ್ಲಿ ಅರಳಿದ ದೇವಪುಷ್ಪ, ಮಾನವೀಯತೆಗೆ ಮಹವಾದ ಮೇರುಮಂದಿರ. ಸಕಲಜೀವಿಗಳಿಗೆ ಲೇಸನ್ನೇ ಬಯಸುವ ಕರುಣಾಸಾಗರ, ಕೂಡಲಸಂಗಮನೆತ್ತಿಕೊಂಡ ಅಮೃತಫಲ, ಭೂಮಿ ಮಾಡಿದ ಅನಂತ ತಪಸ್ಸಿನ ಪ್ರತಿಫಲ, ಗುರುಲಿಂಗ ಜಂಗಮಕೆ ಕರ್ಪೂರವಾದ ಜ್ಯೋತಿ ನಿರ್ಮಲ, ಶ್ರೀ ಸಿದ್ಧಗಂಗಾಗುರು ತೋರಿದ ವಿರಾಟ್ ಪುರುಷ, ನಿನ್ನ ನೆನೆನೆನೆದು ಸುಖಿಯಾಗುವುದೇ ಏನೆಲ್ಲ ಹರುಷ.

ಬುದ್ಧ, ಬಸವ, ಏಸುಕ್ರಿಸ್ತ, ಮಹಮ್ಮದ್ ಪೈಗಂಬರರ ಶ್ರೇಣಿಯಲ್ಲಿ ವಿರಾಜಿಸುವ ಜ್ಯೋತಿ ಪುರುಷ ಬಸವಣ್ಣ. 'ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ' ಎಂಬ ಸಪ್ತ ಶೀಲಗಳನ್ನು ಮನವರಿಕೆ ಮಾಡಿಕೊಟ್ಟ ಮಹಾನುಭಾವ ಬಸವಣ್ಣ. ಪರಮಪೂಜ್ಯ ಶ್ರೀ ಶ್ರೀಗಳವರು ನಾಡಿನುದ್ದಗಲದಲ್ಲಿ 'ಜಗಜ್ಯೋತಿ ಬಸವೇಶ್ವರ' ನಾಟಕದ ಮೂಲಕ ಬಸವತತ್ತ್ವಗಳನ್ನು ೧೦೫೧ ಪ್ರದರ್ಶನಗಳ ಮೂಲಕ ಬಿತ್ತಿದ ಬಸವ ಭಕ್ತಿ ಶಾಂತಭಾನು.

**ಪ್ರೊ. ಹೆಚ್.ವಿ. ವೀರಭದ್ರಯ್ಯ**
**ಸಂಪಾದಕರು**





# ಶ್ರೀವಾಣಿ

'ಬಿದ್ದವರನ್ನು ಬೀಳುತ್ತಿರುವವರನ್ನು, ಬೀಳಲಿರುವವರನ್ನು ಕೈ ಹಿಡಿದು ಮೇಲೆತ್ತುವುದು ಧರ್ಮ' ಹಾಗಾಗಿ ವೀರಶೈವ ಅಥವಾ ಲಿಂಗಾಯತಧರ್ಮ ಸಮಷ್ಠಿಯ ಕಲ್ಯಾಣಕ್ಕಾಗಿ ಬಂದ ಧರ್ಮ. ಆತ್ಮ ಕಲ್ಯಾಣವೆಂಬುದು ಲೋಕಕಲ್ಯಾಣಾಂತರ್ಹತನಾಮವೆಂಬುದನ್ನು ಅರಿತು ಅಂಥವರನ್ನು ಗೌರವಿಸುವ ಸದ್ಭಾವ ಸಂಸ್ಕೃತಿಯ ಸಂಕೇತ. ವಿರಕ್ತ ಮಠಾಧೀಶರು ತತ್ತ್ವನಿಷ್ಠೆಗೆ ಬದ್ಧರಾಗಿ, ಜಂಗಮ ಸ್ವರೂಪವೆನಿಸಿದ ಸಮಾಜರೂಪಿ ಲಿಂಗಾರ್ಚನೆಯಲ್ಲಿ ನಿರತರಾಗಿ ಆತ್ಮ ಸಂತೋಷವನ್ನು ಕಾಣುತ್ತ ಬಂದಿರುವುದು ಲೋಕವಿದಿತವಾದುದಾಗಿದೆ. ವ್ಯಾವಹಾರಿಕ, ವೈದಿಕ ಹಾಗೂ ಪಾರಮಾರ್ಥಿಕ ಜ್ಞಾನ ಸಂಪನ್ನರಾದ ವಿರಕ್ತ ಶ್ರೀಗಳು ಶಿವನೇ ತಾನೆಂಬ ಅನುಭೂತಿ ಸಮ್ಯಕ್ ಜ್ಞಾನ ಪವಿತ್ರರಾಗಿ ಸ್ಥೂಲಾದಿ ದೇಹಗಳ ಭಾವಮುಕ್ತರಾಗಿ, ಶಿವಜ್ಞಾನವೇ ತನ್ನ ದೇಹವೆಂದು ಭಾವಿಸಿ, ಕರ್ತಾರನ ಕಮ್ಮಟದ ಸೇವಾ ನಾಣ್ಯವಾಗುವಲ್ಲಿ ಮಹಂತ ಬೆಳಕಿನತ್ತ ಹೆಜ್ಜೆಯಿಡುತ್ತಾರೆ. ವಿಶ್ವವೇ ತನ್ನ ದೇಹವೆಂದು ಪರಿಭಾವಿಸುವ ಶಿವಯೋಗಿಗೆ ತನ್ನ ವ್ಯಷ್ಟಿ ದೇಹದ ಚಿಂತೆ ಇರದು. ಅದಕ್ಕೆ ಆದ ವಯಸ್ಸು ಎಷ್ಟು ಎಂಬ ಭಾವ ಬರದು. ವಿರಕ್ತರ ಚಿಂತೆಯೆಂದರೆ ವಿಷಯುವಮುಕ್ತರಾಗುವುದು. ವಿಶ್ವದ ಸುಧಾರಣೆಗೆ ಶ್ರಮಿಸುವುದಾಗಿರುತ್ತದೆ. ಅವರು ಆಚಾರ್ಯರಾಗಲಾಶಿಸುವುದಿಲ್ಲ, ಪ್ರವಾದಿಗಳಾಗಲು ಪ್ರಯತ್ನಶೀಲರಾಗುತ್ತಾರೆ. ಅವರ ನಂಬಿಕೆ **'ಶಿವಯೋಗಿಯ ಶರೀರ ವೃಥಾ ಸವೆಯಲಾಗದು'** ಎಂಬ ಕವಿ ರಾಘವಾಂಕನ ಮಾತಿನಲ್ಲಿ ನಂಬಿಕೆಯುಳ್ಳದ್ದು. ಧರ್ಮವೆಂಬುದ ನಂದಾದೀಪವೇ ಹೊರತು, ಸುಡುವ ಬೆಂಕಿಯಲ್ಲ, ಒಡೆಯುವ ಮನಸ್ಸು ಅದರದಲ್ಲ, ಕೂಡುವ, ಕೂಡಿಬಾಳುವ ಪವಿತ್ರ ಚಿತ್ತ.

* * *

ಮೂಢನಂಬಿಕೆಗೆ ಜನ ಬಹಳ ಮಾರುಹೋಗುತ್ತಾರೆ. ಮನುಷ್ಯನಲ್ಲಿ ಬಹಳ ಮೂಢನಂಬಿಕೆಗಳು ಮನೆ ಮಾಡಿಕೊಂಡಿವೆ. ಮೊದಲ ಹಂತದ ಪ್ರಾರ್ಥನೆಯಾದ ನಿರಾಕಾರ ನಿರ್ಗುಣೋಪಾಸನೆಯನ್ನೇ ನೀವು ಪ್ರಾರ್ಥನೆ ಮಾಡುತ್ತಿರುವುದು. ಆ ಶಕ್ತಿಯ ಮುಂದೆ ಬೇರೆಲ್ಲವೂ ಅಣುಪ್ರಾಯ. ಅದು ಅಗಾಧಶಕ್ತಿ ಮತ್ತು ಆ ಶಕ್ತಿಯನ್ನು ವಂಚಿಸಲು ಯಾರಿಗೂ ಸಾಧ್ಯವಾಗುವುದಿಲ್ಲ. ಮನುಷ್ಯ ಏನೇ ಮಾಡಲಿ ಆಡುವ ಪ್ರತಿಯೊಂದು ಮಾತು ಪ್ರಭುವಿಗೆ ಅರಿವಾಗುತ್ತದೆ. ಮಾಡುವ ಪ್ರತಿಯೊಂದು ಕೆಲಸ, ವಿಚಾರ ಎಲ್ಲವೂ ಅವನಿಗೆ ಅರಿವಾಗುತ್ತದೆ. ಪರಮಾತ್ಮ ನಮ್ಮ ಆತ್ಮದ ಒಳಗೂ ಉಂಟು, ಹೊರಗೂ ಉಂಟು. ಗೀತಾವಾಕ್ಯ ಹೇಳುವಂತೆ ಪರಮಾತ್ಮ ಅಂತರ್ಯಾಮಿ. ಈ ವಿಚಾರವನ್ನು ಅರ್ಥಮಾಡಿಕೊಂಡರೆ ಮನುಷ್ಯ ಪರಿವರ್ತನೆ ಆಗುವಂತಹ ಅವಕಾಶ ಉಂಟು. ಪರಮಾತ್ಮ ಎಲ್ಲಾ ಕಡೆ ಉಂಟು ಎನ್ನುವ ಭಾವನೆ ಸ್ಥಿರವಾದರೆ ಬಹಳಮಟ್ಟಿಗೆ ಮನುಷ್ಯ ಉತ್ತಮನಾಗುತ್ತಾನೆ.

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ



**ಲಿಂಗವ ಹಿಡಿದ ಹಸ್ತವೆ ಲಿಂಗಕ್ಕೆ ಪೀಠ ಕಾಣಿರೊ**
**ಲಿಂಗ ಪೂಜಿಸುವ ಹಸ್ತ ಶಿವ ಹಸ್ತ ಕಾಣಿರೊ**
**ಲಿಂಗವ ಧರಿಸಿಪ್ಪ ಅಂಗವ ಲಿಂಗದಂಗ ತಾನೆ ನೋಡಾ,**
**ಲಿಂಗ ಪ್ರಸಾದವ ಕೊಂಬ ಪ್ರಾಣ, ಲಿಂಗವು ತಾನೆ ನೋಡಾ**
**ಒಳ ಹೊರಗೆ ಲಿಂಗಭರಿತವಾಗಿಪ್ಪ ಲಿಂಗದೇಹಿ**
**ಲಿಂಗಪ್ರಾಣಿಗೆ ಕರ್ಮವ ಕಲ್ಪಿಸಿ ನುಡಿವ**
**ಅಬದ್ಧ ಹೊಲಿಯರೆನೇನೆಂಬೆನಯ್ಯಾ**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥**

ಲಿಂಗವ ಹಿಡಿದ ಹಸ್ತವೆ ಲಿಂಗಕ್ಕೆ ಪೀಠ ಕಾಣಿರೊ – ಲಿಂಗವ, ಇಷ್ಟಮಹಾಲಿಂಗವನು, ಪಿಡಿದ ಹಸ್ತವೆ ದೃಢವಿಡಿದಿರುವಂಥ ವಾಮಭಾಗದ ಕರಸ್ಥಲವೆ, ಲಿಂಗಪೀಠ – ಲಿಂಗಕ್ಕೆ ಗದ್ದುಗೆಯಾಗಿಪ್ಪುದು, ಕಾಣಿರೊ – ಕಂಡಿರೊ, ಲಿಂಗವ ಪೂಜಿಸುವ ಹಸ್ತವೆ – ಲಿಂಗವನು ಆರಾಧಿಸುವಂಥಾ ದಕ್ಷಿಣಭಾಗದ ಕರಸ್ಥಲವೆ, ಶಿವಹಸ್ತ ಕಾಣಿರೊ – ಅತ್ಯಂತ ಪೂಜ್ಯ ವಾಚಕತ್ವವನುಳ್ಳ ಶಿವಹಸ್ತವು ಕಂಡಿರೊ ; ಲಿಂಗವ ಧರಿಸಿಪ್ಪ – ಲಿಂಗವನು ಧಾರಣ ಮಾಡಿಕೊಂಡಿರುವ, ಅಂಗವೆ – ದೇಹವೆ, ಲಿಂಗದಂಗ ತಾನೆ ನೋಡಾ – ಆಚಾರಲಿಂಗವು ತಾನೇ ಕಂಡಾ, ಲಿಂಗ ಪ್ರಸಾದವ ಕೊಂಬ – ಲಿಂಗ ಪ್ರಸಾದವನನುಭವಿಸುವ, ಪ್ರಾಣ, ಲಿಂಗವು ತಾನೆ ನೋಡಾ – ಚಿಲ್ಲಿಂಗವು ತಾನೇ ಕಂಡ, ಒಳ ಹೊರಗೆ – ಅಂತರಂಗ ಬಹಿರಂಗದಲ್ಲಿ, ಲಿಂಗಭರಿತವಾಗಿಪ್ಪ – ಲಿಂಗವು ಪೂರ್ಣವಾಗಿರುವ, ಲಿಂಗದೇಹಿ – ಲಿಂಗ ಶರೀರಿಯು, ಲಿಂಗ ಪ್ರಾಣಿಗೆ – ಲಿಂಗವೆ ಹರಣವಾಗುಳ್ಳಾತನಿಗೆ, ಕರ್ಮವ – ಸಂಚಿತಾದಿ ಕರ್ಮತ್ರಯಂಗಳನು, ಕಲ್ಪಿಸಿ – ಉಂಟುಮಾಡಿ, ನುಡಿವ – ಹೇಳುವ, ಅಬದ್ಧ – ಸಠೆಯನ್ನುಳ್ಳಂಥ, ಹೊಲೆಯರ – ಚಾಂಡಾಲರ, ಏನೆಂಬೆನಯ್ಯಾ – ಏನೆಂದು ಹೇಳುವೆನಯ್ಯಾ, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ.

**(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ– ಸಂಪಾದಕರು– ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು–ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)**

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಮನದೊಳಗೆ ಮಂಗನಾಯಿಗಳುಂಟು ತಿಳಿಯೆಂದೆ
ಕಾಗೆ ಗೂಬೆಗಳುಂಟು ತಿಳಿಯೆಂದೆ । ಶ್ರೀಗುರುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದೇಹ ದೇವಾಲಯ ಆತ್ಮಶ್ರೀ ದೇವನು
ಶರಣರೆಂದೀಮಾತ ತಿಳಿಯೆಂದ । ಶ್ರೀಗುರುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಧ್ಯಯನ ಬಿಡದಂತೆ ಅಭ್ಯಾಸ ಕೆಡದಂತೆ
ಆದ್ಯರ ತಿಳಿನುಡಿಯ ಮರೆಯದಿರು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತುರಿವಂತೆ ತೆಂಗನ್ನು ಗೃಹಿಣಿ ಮನೆಯೊಳಗೆ
ತುರಿಬೇಕು ಮನವನ್ನು ಅನುದಿನವು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತೊಳೆಬೇಕು ಮನವನ್ನು ಮೈತೊಳೆವ ಪರಿಯಂತೆ
ಕಳೆಬೇಕು ಒಳಮಲಿನ ಹಗಲಿರುಳು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹರಿವ ಮನಕೆ ಹಗ್ಗ ಮರೆವ ಮನಕೆ ನೆನಹು
ಇರುವ ಪರಿ ತಿಳಿದು ನೀ ಚರಿಸು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಂಸಾರ ಬಿಡಬೇಡ ಸಂನ್ಯಾಸ ತೊಡಬೇಡ
ಸಂಸಾರವೆ ಶಿವಯೋಗವಾಗಿರಲಿ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಾಂತಿ ಸುಖಗಳೆಲ್ಲ ಆಂತರಿಕ ಜೋಡಣೆ
ಎದೆಯೊಳಗೆ ಕುಡಿಯೊಡೆವ ಸಸಿಗಳು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಚಾರವೆಂಬುದು ಆನೆ ನಡೆದ ದಾರಿ
ಸುವಿಚಾರವದಕೆ ಅಂಕುಶವು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಂನ್ಯಾಸಿ ಮಾತು ಮನಮೈಗಳಗೆದ್ದ ಮೂರ್ತಿ
ಲೋಕಸೌಂದರ್ಯದ ಶಿವಶಿಲ್ಪಿ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**ಪ್ರೊ. ಹೆಚ್.ವಿ. ವೀರಭದ್ರಯ್ಯ**



ಸ್ಮರಣೆ

# ಗುಪ್ತನಿಧಿಯ ವ್ಯಕ್ತರೂಪ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು

– ಕೋ. ಚೆನ್ನಬಸಪ್ಪ *

**"ಪಾಹಿಮಾಂ ಶರಣು ಬಸವ**
**ಪಾಹಿಮಾಂ ಶರಣು ಬಸವ**
**ಬಸವ ಪಾಹಿಮಾಂ"**

**'ಬಸವ ಸ್ತುತಿ'** ಎಂಬ ಒಂದು ಪದ್ಯದ ಈ ಪಲ್ಲವಿ ಸಾಲುಗಳನ್ನು ಕಳೆದ ಶತಮಾನದ ಮೊದಲ ಮೂರು ದಶಕಗಳಲ್ಲಿ ಬಸವ ಭಕ್ತರ ಮನೆಗಳಲ್ಲಿ ಬೆಳಗು ಮುಂಜಾನೆ ಮಕ್ಕಳು ಹಾಡುತ್ತಿದ್ದುದನ್ನು ಓಣಿಯಲ್ಲಿ ಹೋಗುವವರು ಕೇಳಬಹುದಾಗಿತ್ತು. ಹೊತ್ತು ಹುಟ್ಟುವ ಮುನ್ನ ನಿಶ್ಶಬ್ದ ವಾತಾವರಣದಲ್ಲಿ ಇನ್ನೂ ಹಕ್ಕಿಗಳು ಆಗತಾನೆ ಎಚ್ಚೆತ್ತು ಮಧುರ ಕಂಠದಿಂದ ಸದ್ದು ಮಾಡುವ ಮೂಡಲಿರುವ ಇಲ್ಲವೆ ಮುಳುಗಲಿರುವ ಚಂದ್ರನ ಮಂದಕಾಂತಿಯಲ್ಲಿ ಹೊಲಕ್ಕೆ ಹೋಗುವ ಜನ ಬಸವ ಸ್ತುತಿಯ ಮಧುರ ಗೀತೆಯನ್ನು ಕೇಳಬಹುದಿತ್ತು.

ಬಸವ ಸ್ತುತಿಯನ್ನು ಹಾಡುತ್ತ ಹಾಡುತ್ತ ಬಸವಣ್ಣನ ಜೀವನ ಚರಿತ್ರೆಯನ್ನು ಕೇಳಬಹುದಿತ್ತು. ಜೀವನ ಚರಿತ್ರೆ ಎಂದರೆ ಬಸವಣ್ಣ ಮಾಡಿದ ಪವಾಡಗಳ ಸರಮಾಲೆ,

**'ಹಾಲು ಮಾರುವ ಗೊಲ್ಲತಿಯು ಕಾಲು ಜಾರಿ ಬೀಳಲಾಗ**
**ರಕ್ಷಿಸೆನ್ನ ಬಸವ ತಂದೆ ಎಂದು ನೆನೆಯಲು.......'**

ಬಸವಣ್ಣ ಅದೆಲ್ಲಿಂದಲೊ ಬಂದು ಬೀಳಲಿದ್ದ ಗೊಲ್ಲತಿಯನ್ನು ಎತ್ತಿ ಹಿಡಿದನೆಂದು ನಾವೆಲ್ಲ ಹಾಡುತ್ತಿದ್ದೆವು. ಬಸವಣ್ಣ ಬಿಜ್ಜಳನ ಆಸ್ಥಾನ ಸೇರಿದ ಮೇಲೆ ಮತ್ತೆ ಪವಾಡಗಳ ಕಥೆ. ಅದರಲ್ಲೊಂದು ಪವಾಡ : 'ಲಕ್ಷದ ಮೇಲೆ ತೊಂಬತ್ತಾರು ಸಾವಿರಕೆ, ಭಿಕ್ಷವ ನೀಡಿದ ತಂದೆ ಬಸವ.....' 'ಜೋಳದ ರಾಶಿಯನ್ನು ಮುತ್ತಾಗಿ ಮಾಡಿದ' ಇನ್ನೊಂದು ಪವಾಡ ! ಈ ಬಸವ ಸ್ತುತಿಯ ಪವಾಡಗಳನ್ನು ರಾಗಯುಕ್ತವಾಗಿ ಹಾಡುವಾಗ, ಹಾಡುವವರಿಗಾಗಲಿ, ಕೇಳುವವರಿಗಾಗಲಿ ಹೀಗೆಲ್ಲ ಆಗಿರುವುದು ಸಾಧ್ಯವೆ ಎಂಬ ಸಂದೇಹದ ಒಂದೇ ಒಂದು ಎಳೆಯೂ ಮನದಲ್ಲಿ ಸುಳಿಯುತ್ತಿರಲಿಲ್ಲ ! ಅಂಥ ಮುಗ್ಧಭಕ್ತಿ – ಅಂದರೆ ನಂಬಿಕೆ.

### ಮಹಾಪವಾಡ

ಆದರೆ ಬರುಬರುತ್ತ, ಬುದ್ಧಿ ಬೆಳೆದಂತೆ ವಿಚಾರಶಕ್ತಿ ಜಾಗ್ರತವಾದಂತೆ ಈ ಪವಾಡಗಳ ಬಗ್ಗೆ ಮೊದಲು ಎಂಥ ಅಚಲ ನಂಬಿಕೆ ಇತ್ತೊ, ಅದು ಸಂಪೂರ್ಣ ತೊಲಗಿ – ಅದೆಲ್ಲ ಶುದ್ಧ ಅಪ್ರಬುದ್ಧ ಕಟ್ಟು ಕತೆ ಎಂಬ ಅಪನಂಬಿಕೆ, ಒಂದು ಬಗೆಯ ತಿರಸ್ಕಾರ ಮನೋಭಾವ ಬಲವಾಗಿ ಬೇರೂರಿತು. ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರಿಗೆ – ಸೋಮಾರಿಗಳಿಗೆ ಪ್ರತಿದಿನ ಬಿಟ್ಟಿ ಅನ್ನ ಹಾಗುತ್ತಿದ್ದನೆಂದರೆ ಬಸವಣ್ಣನಿಗೆ ಬುದ್ಧಿ ಸಮ ಇದ್ದಿರಲಾರದೆಂಬ ಭಾವನೆ ಮೂಡತೊಡಗಿತು. ಒಂದು ವೇಳೆ ಬಂದ ಜಂಗಮರೆಲ್ಲ ಲಿಂಗ ಸ್ವರೂಪಿಗಳು – ನಡೆದಾಡುವ, ಮಾತಾಡುವ ಸಂಗನ ಬಸವರೆಂದೇ ಬಸವಣ್ಣ ಬಗೆದಿದ್ದರೂ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜನರಿಗೆ ಬಹುಶಃ ಕಲ್ಯಾಣ ಪಟ್ಟಣದ ಇಡೀ

* ಹಿರಿಯ ಸಾಹಿತಿಗಳು, ಬೆಂಗಳೂರು

ಪ್ರಜಾ ಸಂಖ್ಯೆಗೆ ಅನ್ನ ಹಾಕುವುದು ಸಾಧ್ಯವೆ ? ಅದಕ್ಕಾಗಿ ರಾಜ್ಯದ ಬೊಕ್ಕಸದಿಂದ ಹಣ ವೆಚ್ಚವಾಗಿರಲಿಲ್ಲವೇ ? ಎಂಬ ಸಂದೇಹ ಸಹಜವಾಗಿ ಉಂಟಾಗಿತ್ತು. ಬರಬರುತ್ತಾ ಬಸವಣ್ಣನ ಪ್ರಾಮಾಣಿಕತೆಯ ಬಗೆಗೆ ಸಂಶಯದ ಕೀಟ ಮೆಲ್ಲಮೆಲ್ಲನೆ ಕೊರೆಯ ತೊಡಗಿತು. ಹುಟ್ಟಿದಾರಭ್ಯ-ಅಷ್ಟೇಕೆ ಹುಟ್ಟುವುದಕ್ಕಿಂತ ಮೊದಲೆ, ತಾಯ ಗರ್ಭದಲ್ಲಿದ್ದಾಗಿನಿಂದ ಬಸವ ಭಕ್ತಿ ನನ್ನಲ್ಲಿ ಬೇರೂರಿದ್ದರೂ ಈಗ ಸಂಶಯದ ಸುಳಿಯಲ್ಲಿ ಸಿಕ್ಕು ಒದ್ದಾಡುತ್ತಿದ್ದೆ. ಈ ಮಾನಸಿಕ ತುಮುಲದಿಂದ ನನಗೇ ಹೆದರಿಕೆಯಾಗತೊಡಗಿತ್ತು. ಲಕ್ಷದ ಮೇಲೆ ತೊಂಬತ್ತಾರು ಸಾವಿರಕ್ಕೆ ಪ್ರತಿದಿನ ದಾಸೋಹ ಮಾಡಿಸುವುದು ಸಾಧ್ಯವೇ ? ಎಂಬ ಸಂದೇಹ ಆಗಾಗ ನನ್ನನ್ನೂ ಕಾಡುತ್ತಿತ್ತು. ಬಹುಶಃ ಆ ಸ್ತುತಿ ಪದ್ಯ ಬರೆದ ಕವಿ ಉತ್ಸಾಹದ ಭರದಲ್ಲಿ ಅತಿ ಉತ್ಪ್ರೇಕ್ಷೆಯಿಂದ ಒಂದಕ್ಕೆ ಹತ್ತು ಹೆಚ್ಚು ಜನ ಜಂಗಮರೆಂದು ಹೇಳಿರಬಹುದೆಂದು ಊಹಿಸಿದ್ದೆ..... ಇಂಥ ಪರಿಸ್ಥಿತಿಯಲ್ಲಿ ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ತಮ್ಮ ಮಠದಲ್ಲಿ ಪ್ರತಿನಿತ್ಯ ಸಹಸ್ರಾರು ವಿದ್ಯಾರ್ಥಿಗಳಿಗೆ ಉಚಿತ ಊಟ ವಸತಿಯನ್ನು ಕೊಟ್ಟು ಅನ್ನ ದಾಸೋಹದ ಜೊತೆಗೆ ಅಕ್ಷರ ದಾಸೋಹ, ಜ್ಞಾನ ದಾಸೋಹವನ್ನು ನಡೆಸುತ್ತಾರೆಂಬ ಸುದ್ದಿಯನ್ನು ಕೇಳಿ ಆಶ್ಚರ್ಯವಾಯಿತು. ದ್ವಿತೀಯ ಜಾಗತಿಕ ಮಹಾಯುದ್ಧದ ಕಾಲದಲ್ಲೂ ಆಹಾರ ಧಾನ್ಯ ನಿಯಂತ್ರಣ, ಸೀಮೆಎಣ್ಣೆ, ಸಕ್ಕರೆ ಮುಂತಾದ ಜೀವನೋಪಾಯದ ಅಗತ್ಯ ವಸ್ತುಗಳ ನಿಯಂತ್ರಣ ಕಾಲದಲ್ಲೂ – ಆಹಾರ ಧಾನ್ಯಗಳನ್ನು ಇಂತಿಷ್ಟು ಪ್ರಮಾಣಕ್ಕಿಂತ ಹೆಚ್ಚಾಗಿ ದಾಸ್ತಾನು ಮಾಡಬಾರದೆಂಬ ಕಟ್ಟು ನಿಟ್ಟಾದ ಸಾವಿರಾರು ಕಟ್ಟಳೆ ಜಾರಿಯಲ್ಲಿದ್ದ ಕಡು ಕಷ್ಟದ ಕಾಲದಲ್ಲೂ ಸಿದ್ಧಗಂಗಾ ಮಠದಲ್ಲಿ ಸಾವಿರಾರು ವಿದ್ಯಾರ್ಥಿಗಳಿಗೆ ಸುತ್ತ ಮುತ್ತಲಿನ ಗ್ರಾಮಗಳ ಅನ್ನಕ್ಕೆ ಗತಿಯಿಲ್ಲದ ಬಡವರಿಗೆ, ಬರಗಾಲಕೆ ತುತ್ತಾಗಿ ನೆಲೆಗೆಟ್ಟು ಗತಿಗೆಟ್ಟು ಬಂದವರಿಗೆ ಅನ್ನದಾಸೋಹ ನಡೆಸುತ್ತಾರೆಂಬ ಸುದ್ದಿ ಕೇಳಿದಾಗ ಬಸವಣ್ಣನ ಅ ಅನ್ನದಾಸೋಹದ ಪವಾಡ ಉತ್ಪ್ರೇಕ್ಷೆಯಾದರೂ ಕೆಲಮಟ್ಟಿಗಾದರೂ ನಿಜವಿದ್ದಿರಬಹುದೆಂಬ ನಂಬಿಕೆ ಮರುಕಳಿಸಿತು. ಈ ನಂಬಿಗೆಯನ್ನು ದೃಢಪಡಿಸಿಕೊಳ್ಳಲಿಕ್ಕಾದರೂ ಈ ಶ್ರೀಮಠಕ್ಕೆ ಹೋಗಿ ಪ್ರತ್ಯಕ್ಷ ನೋಡಬೇಕೆಂದು ಕಳೆದ ಶತಮಾನದ ಮಧ್ಯಭಾಗದಲ್ಲಿ ೧೯೫೬-೬೫ ರ ಕಾಲಾವಧಿಯಲ್ಲಿ ಬಂದಿದ್ದೆ. ಆಗ ಈಗಿರುವಷ್ಟು ಎಂಟು ಸಾವಿರ ವಿದ್ಯಾರ್ಥಿಗಳು, ಈಗ ಕಾಣುವ ಸುಸಜ್ಜಿತ ಭೋಜನಶಾಲೆ, ಭವ್ಯವಾದ ವಸತಿಗೃಹ, ಅತಿಥಿಗೃಹಗಳು ಇರದಿದ್ದರೂ ಆಗಿನ ಪರಿಸ್ಥಿತಿಗೆ ತಕ್ಕಂತೆ ಒಂದೆರಡು ಸಾವಿರ ವಿದ್ಯಾರ್ಥಿಗಳು ನೂರಾರು ಯಾತ್ರಾರ್ಥಿಗಳು, ಬಡವರು, ಭಿಕ್ಷುಕರು ಶ್ರೀಮಠದಲ್ಲಿ ಪ್ರತಿನಿತ್ಯ ಊಟ ಮಾಡುತ್ತಿರುವುದನ್ನು ಪ್ರತ್ಯಕ್ಷ ಕಂಡು ದಿಗ್ಭ್ರಾಂತನಾದೆ ! ಅಚ್ಚರಿಯಿಂದ ಮನದೊಳಗೇ ಅಂದುಕೊಂಡೆ ಇದೆಂಥ ಪವಾಡ ! ಕೈಯಲ್ಲಿ ಕಾಸಿಲ್ಲದ, ಬಹುಶಃ ಹತ್ತಾರು ಕಾವಿ ಕಪನಿಗಳಿಗಿಂತ ಹೆಚ್ಚು ಅರಿವೆಯಿಲ್ಲದ ಈ 'ಸನ್ಯಾಸಿ', ಯಾವ ಭೂ ಆಸ್ತಿಯ ನಿಶ್ಚಿತ ವರಮಾನವಿಲ್ಲದೆ ಒಂದು ಇಂಥ ಮಠ, ಪ್ರತಿದಿನ ಎರಡು ಹೊತ್ತು ಇಷ್ಟು ವಿದ್ಯಾರ್ಥಿಗಳಿಗೆ ಅನ್ನದಾಸೋಹ ಮಾಡುತ್ತಿರುವುದು ಕೇವಲ ಪವಾಡವಲ್ಲ ! ಮಹಾ ಪವಾಡವೆಂದೇ ನಾನು ಭಾವಿಸಿದೆ.

ಪವಾಡ ಎಂದರೆ ಗಾಳಿಯಲ್ಲಿ ಕೈ ಬೀಸಿ ಬೂದಿ ಬರಿಸುವುದಲ್ಲ; ಬರಿಗೈಯಿಂದ ಉಂಗುರ ವಾಚು ಉದುರಿಸುವುದಲ್ಲ. ಅದು ಸಾಧ್ಯವೂ ಸಹಜವೂ ಎಂಬುದರ ಗೊಡವೆಗೆ ಹೋಗುವುದು ಅನಗತ್ಯ. ಅಣಿಮಾಡಿ ಅಷ್ಟಸಿದ್ಧಿ ಪಡೆದವರು – ಸಿದ್ಧಪುರುಷರು – ಸಾಮಾನ್ಯರಿಗೆ ಅಸಾಧಾರಣವೆಂದು ಕಾಣುವುದನ್ನು ಮಾಡಿ ತೋರಿಸಬಲ್ಲರೆಂದು ಹೇಳುತ್ತಾರೆ. ಅದನ್ನು ನಂಬಿ, ಬಿಡಿ, ಆದರೆ ಒಂದು ಮಾತ್ರ ನಿಜ, ಯಾವುದು ಸಾಧಾರಣ ಮಾನವನಿಗೆ ಅಸಾಧ್ಯವೆಂದು ತೋರುವುದೋ ಅದು ಕೆಲವು ಅಸಾಧಾರಣ ಮಾನವರಿಗೆ ಸಾಧ್ಯ ಎಂಬುದು ನಮ್ಮ ನಿತ್ಯಾನುಭವ. ಅಂಥಾದ್ದನ್ನು ಅಜ್ಞ ಜನ 'ಪವಾಡ' ಎಂದು ಕರೆದು ಸಮಾಧಾನ ಪಟ್ಟುಕೊಳ್ಳಬಹುದು. ಆದರೆ ಅದು ವಾಸ್ತವವಾಗಿ ಅಸಾಧಾರಣ ಸಂಗತಿ, ಘಟನೆ ಅಲ್ಲವೆ ಅಲ್ಲ ! ಹಸಿರು ಗಿಡದಲ್ಲಿ ಕೆಂಪು, ಹಳದಿ.... ಬಣ್ಣದ ಹೂ ಬಿಡುವ ಪವಾಡದಂತೆ ಇದೂ ಪ್ರಕೃತಿ ನಿಯಮ, ಕಾರಣ ತಿಳಿಯದವರು ಅದನ್ನು ಪವಾಡ ಎಂದು ಕರೆಯುತ್ತಾರೆ.

## ಅನ್ನದಾಸೋಹ

ಈ ಮಾನದಂಡದಿಂದ ಸಿದ್ಧಗಂಗಾ ಮಠಾಧ್ಯಕ್ಷ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ಈ ಮಹಾ ಅನ್ನ



ದಾಸೋಹವನ್ನು ಪರಿಶೀಲಿಸಬೇಕು, ಈಗ ಶ್ರೀಮಠದ ವಿದ್ಯಾರ್ಥಿಗಳ ಸಂಖ್ಯೆ ಎಂಟುಸಾವಿರ. ಬಂದು ಹೋಗುವ ಅಸನಾರ್ಥಿಗಳ ಸಂಖ್ಯೆ ದಿನಕ್ಕೆ ಐದಾರು ನೂರು. ಒಂದು ದಿನಕ್ಕೆ ಕನಿಷ್ಠ ಪಕ್ಷ ಒಂದೂ ಕಾಲು ಲಕ್ಷ ರೂಪಾಯಿಗಳ ಖರ್ಚು !! ಕೇವಲ ರೂಪಾಯಿಗಳ ಸಂಖ್ಯೆಯನ್ನು ನೋಡಿದರೇನೆ ಈ "ಸಂನ್ಯಾಸಿ'ಗಳಿಗೆ ಇಷ್ಟೊಂದು ಧನಸಹಾಯ ಹೇಗೆ, ಎಲ್ಲಿಂದ ಬರುತ್ತದೆ ? ಅಲ್ಲಿ ಇಲ್ಲಿ ಒಂದಿಷ್ಟು ಭೂಮಿ ಇರಬಹುದು, ಕೆರೆಹಿಂದಿನ ನೀರಾವರಿ ಭೂಮಿಯೂ ಇರಬಹುದು, ಬೆಂಗಳೂರಿನಲ್ಲಿ ಒಂದೆರಡು ಬಾಡಿಗೆ ಬರುವ ವಾಣಿಜ್ಯ ಸಂಕೀರ್ಣ ಕಟ್ಟಡಗಳೂ ಇರಬಹುದು. ಆದರೆ ಈ ಭೂಮಿ ಕಟ್ಟಡಗಳಿಂದ ಬರುವ ವರಮಾನ ಶ್ರೀಮಠದ ವಿದ್ಯಾರ್ಥಿಗಳ ಮಜ್ಜಿಗೆಗೂ ಸಾಕಾಗಲಾರದು ! ಹಾಗಾದರೆ ಈ ಬೃಹತ್ ಪ್ರಮಾಣದ ದಾಸೋಹಕ್ಕೆ ಬೇಕಾದ ಧನ ಧಾನ್ಯ ಹೇಗೆ ಬರುತ್ತದೆ ? ಸಾಧಾರಣ ಜನರಿಗೆ ಇದು ಸಾಧ್ಯವಾಗದ, ಅರ್ಥವಾಗದ ಸಂಗತಿ. ಅಂದರೆ ಶ್ರೀ ಮಠಾಧ್ಯಕ್ಷರಾದ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಅಸಾಧಾರಣ ಮಹದ್ವ್ಯಕ್ತಿಗಳೆಂದೇ ಹೇಳಬೇಕಾಗುತ್ತದೆ. ನಮ್ಮ ನಿಮ್ಮಲ್ಲಿ ಇಲ್ಲದ ಯಾವುದೋ ಒಂದು ಶಕ್ತಿ ಅವರಲ್ಲಿದೆ ಎಂದೇ ಕಾಣುತ್ತದೆ. ಬಸವಣ್ಣ ಆ ಪ್ರಮಾಣದಲ್ಲಿ ಮಾಡಿದ ದಾಸೋಹಕ್ಕೆ ಬೇಕಾದ ಶಕ್ತಿಯಂಥಾದ್ದೆ ಒಂದು ಅಸಾಧಾರಣ ಶಕ್ತಿ ಇವರಲ್ಲಿಯೂ ಈ ಅನ್ನದಾಸೋಹಕ್ಕೆ ತಕ್ಕಷ್ಟು ಇವರಲ್ಲಿಯೂ ಇರಬೇಕು. ಇಲ್ಲದೆ ಹೋಗಿದ್ದರೆ ಇಂಥ ಮಹಾದಾಸೋಹವನ್ನು ನಡೆಸುವುದು ಸಾಧ್ಯವಿಲ್ಲ. ಹಾಗಾದರೆ ಸ್ವಾಮಿಗಳಲ್ಲಿರುವ ಆ ಶಕ್ತಿ ಯಾವುದು ? ಅದನ್ನು ಯಾರೂ ಗ್ರಹಿಸಲಾರರು. ಅದು ಅಗ್ರಾಹ್ಯ. ಅದನ್ನು ಯಾರೂ ಅರಿಯಲಾರರು. ಅದು ಅಜ್ಞೆಯ. ಆದರೂ ಅದು ಆ ಅಗ್ರಹ್ಯ, ಅಜ್ಞೆಯ ಶಕ್ತಿ ತನ್ನ ಈ ಕ್ರಿಯೆಯಲ್ಲಿ ವ್ಯಕ್ತವಾಗಿದೆ. ಆ ಶಕ್ತಿಯನ್ನು ಅವರು ಪಡೆದದ್ದು ಹೇಗೆ ? ಅದೂ ಯಾರಿಗೂ ಗೊತ್ತಾಗದು, ಪಡೆದವನಿಗೇ ಪಡೆದುಕೊಂಡ ಮಾರ್ಗೋಪಾಯ ಗೊತ್ತು. ಅದನ್ನರಸುವುದೂ ಅರಿಯುವುದೂ ಕಷ್ಟ. ಅದೊಂದು ತಪೋನಿಧಿ. ಆ ಗುಪ್ತನಿಧಿಯ ವ್ಯಕ್ತರೂಪ ಸಿದ್ಧಗಂಗಾ ಕ್ಷೇತ್ರದಲ್ಲಿ ನಿತ್ಯ ನಡೆಯುವ ಅನ್ನ ದಾಸೋಹ, ಜ್ಞಾನದಾಸೋಹ. ಆ ತಪೋಧನವನ್ನು ಹೊತ್ತು ಉಸಿರಾಡುವ, ಮಾತಾಡುವ, ನಡೆದಾಡುವ, ಜ್ಞಾನದಾಸೋಹ. ಆ ತಪೋಧನವನ್ನು ಹೊತ್ತು ಉಸಿರಾಡುವ, ಮಾತಾಡುವ, ನಡೆದಾಡುವ ಲಿಂಗರೂಪಿ ಶ್ರೀ ಸಿದ್ಧಗಂಗಾ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು. ಈ ಅಂಗದೊಳಗಿರುವ ಆ ಲಿಂಗವೆ ಇದನ್ನೆಲ್ಲ ಮಾಡಿಸುತ್ತಿದೆ, ಮಾಡುವಾತ, ಮಾಡಿಸುವಾತ ಆ ಮೂಲ ಪುರುಷ – ಶ್ರೀಗುರು. ಆ ಗುರುವಿನ ಉಪಕರಣವಾಗಿ ಶ್ರೀ ಸ್ವಾಮಿಗಳು ಕಾಯಕ ಮಾಡುತ್ತಾ ಬಂದಿದ್ದರು.

ಈ ಮಹಾದಾಸೋಹ ಮಣಿಹಕ್ಕೆ ಅಣಿಯಾಗಲು ಸ್ವಾಮಿಗಳಿಗೆ ಪ್ರೇರಣೆ ಏನು ? ಸ್ವಾಮಿಗಳು ಪಟ್ಟಕ್ಕೆ ಬರುವುದಕ್ಕಿಂತ ಮುಂಚೆಯೆ ತಾವು ಕಲಿತ ವಿದ್ಯೆಯಿಂದ, ಗ್ರಂಥಾಧ್ಯಯನ ಆತ್ಮ ಸಾಧನೆಯ ಮೂಲಕ ಮನುಕುಲದ ಉದ್ಧಾರ ವಿದ್ಯೆಯಿಂದಲೆ ಸಾಧ್ಯವೆಂಬುದನ್ನು ಸ್ಪಷ್ಟವಾಗಿ ಅರಿತಿದ್ದರೆಂದು ಕಾಣುತ್ತದೆ. ಬಸವಾದಿ ಪ್ರಮಥರ ದರ್ಶನ ದೀಪ್ತಿ, ಎಡೆಯೂರು ಸಿದ್ಧಲಿಂಗೇಶ್ವರರ ಸಿದ್ಧಿ, ಪ್ರಾಚ್ಯ ಪಾಶ್ಚಾತ್ಯ ತತ್ತ್ವಜ್ಞಾನದ ಅಧ್ಯಯನದ ಫಲ, ಆಧುನಿಕ ಮಹರ್ಷಿಗಳಾದ ಶ್ರೀ ಅರವಿಂದರ ದರ್ಶನ, ಸ್ವಾಮಿ ವಿವೇಕಾನಂದ, ರಮಣ ಮಹರ್ಷಿ ಮುಂತಾದವರ ಪ್ರಭಾವ, ರಾಜಕೀಯ ಕ್ಷೇತ್ರದಲ್ಲಿ ಮಹಾತ್ಮಾ ಗಾಂಧೀಜಿಯ ಪ್ರಭಾವ ಶ್ರೀ ಶ್ರೀ ಸ್ವಾಮಿಗಳ ಜೊತೆಗೆ ಕರ್ನಾಟಕದಲ್ಲಿ ಕಳೆದ ಶತಮಾನದ ಮೊದಲ ಎರಡು ಮೂರು ದಶಕಗಳಲ್ಲಿ ವೀರಶೈವ ಸಮಾಜದಲ್ಲಿ ಉಂಟಾದ ಸಾಮಾಜಿಕ ಕ್ರಾಂತಿ, ವಿದ್ಯಾಕ್ಷೇತ್ರದಲ್ಲಿ ಲಿಂಗಾಯತ ಮಠಾಧೀಶ್ವರರು ವಹಿಸಿದ ಪಾತ್ರ, ಮಾಡಿದ ಕೆಲಸ ಶ್ರೀ ಸ್ವಾಮಿಗಳಿಗೆ ಆದರ್ಶವೂ ಮಾರ್ಗದರ್ಶನವೂ ಸ್ಫೂರ್ತಿಯೂ ಆಗಿರಬೇಕು, ವಿದ್ಯೆಯ ಸಕಲ ಸಮಸ್ಯೆಗಳ ಪರಿಹಾರದ ಏಕಮಾತ್ರ ಸರ್ವೋತ್ಕೃಷ್ಟ ಮಾರ್ಗ ಎಂಬುದನ್ನು ಸ್ವಾಮಿಗಳು ಆ ಚಿಕ್ಕವಯಸ್ಸಿನಲ್ಲಿಯೇ ಅರಿತುಕೊಂಡಿದ್ದರು. "ವಿದ್ಯೆಯಿಂದ ಪರಿಹರಿಸಲಾಗದ ಯಾವ ಸಮಸ್ಯೆಯೂ ಇಲ್ಲ' ಎಂದು ಘೋಷಿಸಿದ ಶ್ರೀ ಸ್ವಾಮಿ ವಿವೇಕಾನಂದರ ಸಿಂಹವಾಣಿಯ ಸತ್ವವನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು ಮನಗಂಡಿದ್ದರು. ಆದ್ದರಿಂದಲೇ ಶಿಕ್ಷಣಕ್ಕೆ ಬೇಕಾದ ಪ್ರಾಥಮಿಕ ಆವಶ್ಯಕತೆ ಉಚಿತ ವಸತಿ, ಅಸನದ ಏರ್ಪಾಟನ್ನು ಸ್ವಾಮಿಗಳು ಕೈಕೊಂಡರು.

## ಕಾಯಕ

ಕಳೆದ ಶತಮಾನದ ನಾಲ್ಕು ಐದನೆಯ ದಶಕಗಳಲ್ಲಿ ತುಮಕೂರಿನಲ್ಲಿ ಓದುತ್ತಿದ್ದವರು, ಸಿದ್ಧಗಂಗಾ ಮಠದ ಹಾಸ್ಟೆಲಿನಲ್ಲಿದ್ದ ವಿದ್ಯಾರ್ಥಿಗಳು ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ವಸತಿಗೃಹ (ಹಾಸ್ಟಲ್) ಕಟ್ಟಿಸಲು ಹೇಗೆ ದೈಹಿಕ ಶ್ರಮವಹಿಸಿದರೆಂಬುದನ್ನು ಈಗಲೂ ನೆನೆಸುತ್ತಾರೆ. ಕಟ್ಟುತ್ತಿದ್ದ ಕಟ್ಟಡ ಸೈಜು ಕಲ್ಲುಗಳನ್ನು ವಿದ್ಯಾರ್ಥಿಗಳ ಜೊತೆಗೆ ತಾವೇ ಭುಜದ ಮೇಲೆ ಹೊತ್ತೊಯ್ದು ಹಾಕುತ್ತಿದ್ದುದನ್ನು ಕಣ್ಣಾರೆ ಕಂಡವರಿದ್ದಾರೆ. ತಮ್ಮ ಇಳಿವಯಸ್ಸಿನಲ್ಲೂ ಬಸವ ಧರ್ಮ, ಕಾಯಕ ಸಿದ್ಧಾಂತ, ಅಷ್ಟಾವರಣ ಷಟ್‌ಸ್ಥಲಗಳ ವಿವರಣೆ, ಶ್ರೀ ವಿವೇಕಾನಂದ, ಶ್ರೀ ಅರವಿಂದ ದರ್ಶನ, ಕ್ಯಾಂಟ್, ರಸೆಲ್ ಮುಂತಾದ ಚಿಂತಕರ ವಿಚಾರಧಾರೆಯನ್ನು ನಿರರ್ಗಳವಾಗಿ ವ್ಯಾಖ್ಯಾನಿಸುವ ವಿದ್ವತ್ತನ್ನು ನೋಡಿದರೆ ಈ ಪ್ರತಿಭಾವಂತ ತತ್ತ್ವಜ್ಞಾನಿ ಶಿಲಾಭಾರವನ್ನು ಹೆಗಲ ಮೇಲೆ ತಲೆಯ ಮೇಲೆ ಹೊತ್ತಿರಬಹುದೆ ? ಇದೆಲ್ಲ ಸತ್ಯ ಎಂಬುದಕ್ಕೆ ಅದನ್ನು ಕಣ್ಣಾರೆ ಕಂಡದ್ದಕ್ಕೆ ಸಾಕ್ಷಿಗಳಿದ್ದಾರೆ.

ಕಟ್ಟಡ ಕಟ್ಟಿಸುವುದು, ಅನ್ನ ಹಾಕುವುದರ ಜೊತೆಗೆ ಬಂದ ವಿದ್ಯಾರ್ಥಿಗಳ ನಡತೆಯನ್ನು ತಿದ್ದುವುದರಲ್ಲೂ ಸ್ವಾಮಿಗಳು ಆಸಕ್ತಿ ವಹಿಸಿದ್ದರು. ವಿದ್ಯಾರ್ಥಿಗಳಲ್ಲಿ ಶಿಸ್ತು, ಸದ್ವರ್ತನೆ ಬೆಳೆಯುವಂತೆ ನಿಗಾವಹಿಸಿದ್ದರು. ಸಿದ್ಧಗಂಗಾ ಮಠದಲ್ಲಿದ್ದು ಓದಿ, ಉನ್ನತ ವ್ಯಾಸಂಗ ಮಾಡಿ ಈ ದೇಶದಲ್ಲಿಯೆ ಉತ್ತಮ ಸ್ಥಾನಕ್ಕೇರಿ, ಅದಕ್ಕಿಂತ ಉತ್ತಮ ಜೀವನ ಸಾಗಿಸುತ್ತಿರುವವರ ಸಂಖ್ಯೆ ಸಾವಿರ ಸಾವಿರ, ಅಲ್ಲಿ ಕಲಿತು ಮುಂದಕ್ಕೆ ಬಂದು ವಿದೇಶಗಳಲ್ಲೂ ಜೀವನೋಪಾಯ ಕಂಡುಕೊಂಡವರೂ ನೂರಾರು ಜನ. ಪ್ರಪಂಚದ ವಿವಿಧ ದೇಶಗಳಲ್ಲಿರುವ ಅನಿವಾಸಿ ಭಾರತೀಯರಲ್ಲಿ ಸಿದ್ಧಗಂಗಾ ಪ್ರಸಾದ ನಿಲಯದ ಆಶ್ರಯ ಪಡೆದವರು ಅನೇಕ ಕಡೆ ಇದ್ದಾರೆ. ಅಂಥವರು ಈ ಮಠಕ್ಕೆ ವರ್ಷಕ್ಕೆ ಒಂದು ಕ್ವಿಂಟಾಲ್ ಅಕ್ಕಿ, ರಾಗಿ, ಜೋಳ, ಒಂದೊಂದು ತರಗತಿಗೆ ಬೇಕಾಗುವ ಪಠ್ಯಪುಸ್ತಕಗಳನ್ನು ದಾನ ಮಾಡಿದರೆ ಈ ಸಂಸ್ಥೆ ನಿಶ್ಚಿಂತತೆಯಿಂದ ಇನ್ನೂ ನೂರು ವರ್ಷ ಬಡವರಿಗೆ ಉಚಿತ ಅಸನ, ವಸತಿಯನ್ನು ಒದಗಿಸೀತು, ಆದರೆ ದುರ್ದೈವದ ಸಂಗತಿ ಆ ಹಳೆಯ ವಿದ್ಯಾರ್ಥಿಗಳಿಂದ ಅಂಥ ಹೇಳಿಕೊಳ್ಳುವ ನೆರವು ಸಿಗುತ್ತಿಲ್ಲ ಎಂದು ಕೇಳಿದ್ದೇನೆ. ಅವರು ಜೀವನದಲ್ಲಿ ಏನಾಗಿದ್ದಾರೆಯೋ ಅದರ ಬುನಾದಿ ಈ ಮಠದ ಅನ್ನದಿಂದಲೇ ಸಿದ್ಧವಾದದ್ದು ಎಂಬ ಕೃತಜ್ಞತೆ ಅವರಿಗಿರಬೇಕು, ಬಹುಶಃ ಇಂಥವರನ್ನು ನೋಡಿಯೇ ಸ್ವಾಮಿ ವಿವೇಕಾನಂದರು : ಇವರು ವಿದ್ಯಾವಂತ ಡಕಾಯಿತರು ! ಎಂದು ಹೇಳಿರಬೇಕು. ತಾವು ಕಲಿತ ವಿದ್ಯೆ, ಬಡಪ್ರಜೆಗಳ ತೆರಿಗೆಯಿಂದ ಸ್ಥಾಪಿತವಾದ ವಿದ್ಯಾಸಂಸ್ಥೆಗಳಿಂದಲೇ ಬಂದುದು ಎಂಬ ಅರಿವು ಅವರಿಗಿರಬೇಕು. ಪ್ರಜೆಗಳ ಶ್ರಮದಿಂದ ಬೆಳೆದ ತಮ್ಮ ಬುದ್ಧಿಯಿಂದ ಅವರಿಗೆ ಮರಳಿ ಋಣ ತಿರಿಸದಿದ್ದರೆ ಅವರು ಡಕಾಯಿತರಲ್ಲದೆ ಮತ್ತಾರು. ಎಲ್ಲ ಹಳೆಯ ವಿದ್ಯಾರ್ಥಿಗಳೂ ಹೀಗೆಂದಲ್ಲ. ಅವರಲ್ಲಿ ಕೆಲವರು ಋಣತತ್ತ್ವವನ್ನು ಮರೆತಿದ್ದಾರೆಂಬುದೇ ವ್ಯಥೆಯ ವಿಚಾರ.

## ಜಾತ್ಯಾತೀತ ಮಠ

ಶ್ರೀ ಸಿದ್ಧಗಂಗಾ ಮಠದ ಪ್ರಸಾದ ನಿಲಯದ ವೈಶಿಷ್ಟ್ಯವೆಂದರೆ (ಹಾಗೆಯೇ ಸುತ್ತೂರು ಮತ್ತು ಸಿರಿಗೆರೆ ಮಠಗಳ ಪ್ರಸಾದ ನಿಲಯಗಳಲ್ಲೂ ಕೂಡ) ಅವು ಲಿಂಗಾಯತ ಸ್ವಾಮಿಗಳಿಂದ ಸ್ಥಾಪನೆ ಆಗಿದ್ದರೂ, ಅಲ್ಲಿ ಸಮಸ್ತ ಜಾತಿ, ಕುಲ, ಕೋಮಿನವರಿಗೂ ಪ್ರವೇಶವುಂಟು. ಹರಿಜನರ ರವರೆಗೆ, ಮುಸ್ಲಿಂ, ಕ್ರಿಶ್ಚಿಯನ್ ಆದಿಯಾಗಿ, ಬ್ರಾಹ್ಮಣ ಜಾತಿಯವರಿಗೂ ಜನಾಂಗದ ಎಲ್ಲ ಅಲ್ಲಿ ಸಹಭೋಜನದ ಆಶ್ರಯವುಂಟು. ಬೀದರ್, ನಿಪ್ಪಾಣಿಯಿಂದ ಹಿಡಿದು ವ್ಯವಸ್ಥೆ ಉತ್ತರ ಕರ್ನಾಟಕದ ಭಾಲ್ಕಿ, ಕೊಳ್ಳೆಗಾಲ, ಉಳ್ಳಾಲ ಮುಂತಾದ ದಕ್ಷಿಣದ ಕೋಲಾರ, ಕಡೆಯವರಿಗೂ ಅಲ್ಲಿ ಆಶ್ರಯ ಸಿಕ್ಕಿದೆ ! ಜಾತಿಗೊಬ್ಬ "ಜಗದ್ಗುರು"ಗಳು ಈಗ ತಲೆ ಎತ್ತುತ್ತಿದ್ದರೂ, ಆಯಾ ಜಾತಿಯ ಜಗದ್ಗುರುಗಳು ತಮ್ಮ ತಮ್ಮ ಜಾತಿಯ ವಿದ್ಯಾರ್ಥಿಗಳಿಗೆ ಉಚಿತ ಊಟ ವಸತಿಯ ಏರ್ಪಾಟುಗಳನ್ನು ಅವರ ಸಂಖ್ಯಾಬಲಕ್ಕೆ ಅನುಗುಣವಾಗಿ ಮಾಡಿಲ್ಲ. (ಬಹುಶಃ ಆದಿಚುಂಚನಗಿರಿ ಮಠದ ಉಚಿತ ವಸತಿಗೃಹಗಳ ಹೊರತು) ಸಿದ್ಧಗಂಗಾ ಮಠದ ಶ್ರೀ ಸ್ವಾಮಿಗಳು ಇಂಥ ವಿಶಾಲ ದೃಷ್ಟಿಯಿಂದ ಸೇವೆ ಮಾಡುತ್ತಿದ್ದರೂ ಕೆಲವು ವರ್ಷಗಳ ಹಿಂದೆ ಕ್ಷುಲ್ಲಕ ರಾಜಕಾರಣಿಗಳು ಅಲ್ಲಿಯೂ ಜಾತೀಯತೆಯ ವಿಷಬೀಜ ಬಿತ್ತಲು ಪ್ರಯತ್ನಿಸಿ ವಿಫಲರಾದರು. ರಾಜಕಾರಣಿಗಳಲ್ಲಿರುವ ಕುತ್ಸಿತ ಬುದ್ಧಿ ಹಳ್ಳಿಯ



ಬಡಭಕ್ತರಿಗೆ ಇಲ್ಲದಿರುವುದರಿಂದ ಶ್ರೀ ಸಿದ್ಧಗಂಗಾ ಕ್ಷೇತ್ರ ಉಜ್ವಲವಾಗಿಯೆ ಬೆಳಗುತ್ತಿದೆ.

ಪುಣ್ಯಭೂಮಿ, ಕರ್ಮಭೂಮಿ, ಪವಿತ್ರಭೂಮಿ ಎಂದು ಬಣ್ಣಿಸಲಾದ ಈ ದೇಶಕ್ಕೆ ಜಾತೀಯತೆಯೆಂಬ ಕ್ಯಾನ್ಸರ್ ರೋಗ ಸಹಸ್ರಾರು ವರ್ಷಗಳಿಂದ ಬಡಿದುಕೊಂಡಿದೆ. ಆ ಮಹಾ ವ್ಯಾಧಿಗೆ ಮದ್ದು ಕೊಡುವ ಯಾವ ಯಶಸ್ವಿ ಧನ್ವಂತರಿಯೂ ಹುಟ್ಟುಕೊಂಡಿಲ್ಲ. ಆದರೂ ಆಗಾಗ ಮಹಾಮಹಿಮರು ಒಬ್ಬಿಬ್ಬರು ಆಗಿ ಹೋಗಿದ್ದಾರೆ. ಬಸವಣ್ಣ ಅಂಥ ಒಬ್ಬ ಮಹಾಮಹಿಮಾ ಪುರುಷ. ಜಾತೀಯತೆಯ ಅತ್ಯಂತ ಕರಾಳ, ವಿಕಾರ, ಭೀಕರ ಮುಖವಾದ ಅಸ್ಪೃಶ್ಯತಾ ನಿವಾರಣೆಗಾಗಿ ಪರಿಣಾಮಕಾರಿಯಾದ ಉಪಾಯವನ್ನು ಸೂಚಿಸಿ, ಆಚರಿಸಿದ ಕಾರಣಪುರುಷ ಬಸವಣ್ಣ. ಆ ಆಚರಣೆಯ ಉಚ್ಛ್ರಾಯ ನಿದರ್ಶನ ಹರಳಯ್ಯ-ಮಧುವರಸರ ಮಕ್ಕಳ ಮದುವೆಯ ಸಂಬಂಧ ! ಅಂತರ್ಜಾತಿ ವಿವಾಹ, ದೇಹ ಸಂಬಂಧದ ಸಿದ್ಧೌಷದವೆ ಜಾತಿ ಜಾಡ್ಯ ನಿವಾರಣೆಯ ಉಪಾಯ ಎಂದು ಪ್ರಪ್ರಥಮವಾಗಿ ಆಚರಣೆಯಲ್ಲಿ ತಂದ ಮಹಾಕ್ರಾಂತಿಕಾರಿ ಬಸವಣ್ಣ. ಅಂಥವರ ಪರಂಪರೆಗೆ ಸೇರಿದ ಮಠ ಶ್ರೀ ಸಿದ್ಧಗಂಗಾ ಮಠ. ಅದರ ಇಂದಿನ ಪೀಠಾಧ್ಯಕ್ಷರು ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು. ಅಂಥ ಪವಿತ್ರ ಉಜ್ವಲ ಪರಂಪರೆಯ ಈ ಮಠದಲ್ಲಿ ಜಾತೀಯತೆಯ ನಿರ್ಮೂಲನಕ್ಕಾಗಿ ಸದ್ದಿಲ್ಲದೆ ಮಾಡುತ್ತಿರುವ ಮಹಾಕ್ರಾಂತಿ ಶ್ರೀಮಠದ ಈ ಅನ್ನದಾಸೋಹ, ಸಹಭೋಜನ ವ್ಯವಸ್ಥೆ ! ಹುಟ್ಟಿನಿಂದ ಹೊಲೆಯ ಮಾದಿಗ, ಬೇಡ, ಬೆಸ್ತ, ಕೊರಚ, ಕುಂಚಿಟಿಗ, ಕುರುಬ, ಕುಂಬಾರ, ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಎಂಬ ಜಾತಿಭಾವನೆಯೂ ಇಲ್ಲದೆ ಒಂದೆ ಪಂಕ್ತಿಯಲ್ಲಿ ಕುಳಿತು ಉಣ್ಣುವ, ಬದುಕುವ ಆ ವಸುದೈವ ಕುಟುಂಬದ ದೃಶ್ಯ ಎಷ್ಟು ಎಂಥ ನಯನ ಮನೋಹರ ! ಮಮಾತ್ಮಾ ಸರ್ವಭೂತಾತ್ಮ ಎಂಬ ಉಪನಿಷತ್ ಸತ್ಯವನ್ನು ಧರೆಗಿಳಿಸಿ ತೋರಿಸುವ ಈ ದೃಶ್ಯ ಪವಾಡವಲ್ಲದೆ ಮತ್ತೇನು ? ಜಾತಿಗೊಬ್ಬ ಜಗದ್ಗುರುಗಳಾಗಿ ಅಡ್ಡಪಲ್ಲಕ್ಕಿ, ಕಾಮ ಪೀಡಿತರಾಗಿರುವ ಎಷ್ಟು ಜನ ಸ್ವಾಮಿಗಳು ಈ ಪವಾಡ ಮಾಡಿದ್ದಾರೆ ? ಸುಮ್ಮನೆ ಬಡಿವಾರದ ಮಾತನಾಡಿದರೆ ಸಾಲದು. ಆಡಿದಂತೆ ಮಾಡಿ ತೋರಿಸುವವರು ಎಷ್ಟು ಜನ ?

ವಿದ್ಯೆಯು ಸರ್ವಸಮಸ್ಯೆಗಳ ಪರಿಹಾರದ ಮಾಸ್ಟರ್ ಕೀ ಎಂಬುದನ್ನು ಮನಗಂಡ ಸ್ವಾಮಿಗಳು ಪಶುಮಾನವನನ್ನು ದೇವಮಾನವನನ್ನಾಗಿ ಪರಿವರ್ತಿಸುವ ರಸವಿದ್ಯೆಯನ್ನು ಕಲಿಸುವ ಕರ್ತಾರರೂ ಆಗಿದ್ದಾರೆ. ಆ ಘನ ಕಾರ್ಯವನ್ನು ಈಗ ನಾವಿಲ್ಲಿ ವಿಶ್ಲೇಷಿಸುವಂತೆ ಬುದ್ಧಿ ಪೂರ್ವಕವಾಗಿ ಕೈಗೊಂಡರೆಂದು ಹೇಳಲಾಗದಿದ್ದರೂ - ಯಾರಿಗೆ ಗೊತ್ತು ಆ ಗುಪ್ತೋದ್ದೇಶ ಇದ್ದಿರಲೂ ಬಹುದು - ಅದರ ಪರಿಣಾಮ ಮಾತ್ರ ಆ ದಿಕ್ಕಿನತ್ತ ಸಾಗುತ್ತಿರುವುದನ್ನು ದಿವ್ಯಜೀವನದ ಕನಸುಗಾರರು ಕಾಣಬಹುದು, ಮನುಕುಲದ ಉದ್ಧಾರ, ವಿಕಾಸ ಕ್ರಮೇಣ "ಮನುಜಕುಲ ತಾನೊಂದೆವಲಂ" ಎಂಬ ಸತ್ಯದಲ್ಲಿದೆ. ಅಲ್ಲದೆ ಬೇರೆ ಮಾರ್ಗವಿಲ್ಲ. ಒಂದು ಅರ್ಥದಲ್ಲಿ ಒಂದು ಮಿತಿಯಲ್ಲಿ ಶ್ರೀ ಸಿದ್ಧಗಂಗಾ ಮಠ, ಹಾಗೆಯೇ ಸುತ್ತೂರು ಮಠ ದಿವ್ಯಜೀವನ ಸಿದ್ಧಿಯ ಪ್ರಯೋಗ ಶಾಲೆಗಳು ಇವು ನಮ್ಮ ದೇಶದ ಬಹುಮುಖಿ ಸಂಸ್ಕೃತಿಯ ಸಮೃದ್ಧಿಗಾಗಿ ಹೆಣಗುತ್ತಿರುವ ಕೇಂದ್ರಗಳಾಗಿ ಬೆಳಗುತ್ತಿದೆ. ಬಹುಧರ್ಮ, ಬಹು ಭಾಷಾ, ಬಹು ಮತ ಪಂಥಗಳಲ್ಲಿ ಐಕ್ಯತೆಯನ್ನು ಸಾಧಿಸುವ ಜ್ಯೋತಿ ದ್ವೀಪಗಳು. ನಮ್ಮ ಸಂವಿಧಾನದ ಜಾತ್ಯಾತೀತ ಘನೋದ್ದೇಶವನ್ನು ಎತ್ತಿ ಹಿಡಿಯುವ ವೃದ್ಧಿಪಡಿಸುವ ಸಜೀವ ಸಂಸ್ಥೆಗಳು, ಇಂಥ ಸಂಸ್ಥೆಗಳ ಸಂಖ್ಯೆ ಅಸಂಖ್ಯಾತವಾಗಿ ಬೆಳೆಯಬೇಕು. ಈ ದೇಶ ಲೋಕಕ್ಕೆ ಮಾರ್ಗದರ್ಶ ಆಗಬೇಕು. ಮನುಕುಲದ ಗುರುವಾಗಬೇಕು. ಈಗ ಈ ಆಸೆ, ಈ ಗುರಿ, ಈ ಹೇರಲಾರದ ಆದರ್ಶವಾಗಿ ಕಾಣುತ್ತಿರುವುದು ನಿಜ. ಇಲ್ಲಿ ಈಗ ನಡೆಯುತ್ತಿರುವ ಜಾತಿ ವೈಷಮ್ಯ, ರಾಜಕೀಯ ಭ್ರಷ್ಟಾಚಾರ, ಮತಭ್ರಾಂತಿ, ಮೌಢ್ಯದ ಕಗ್ಗತ್ತನ್ನು ನೋಡಿದರೆ **'ಮನುಜಕುಲ ತಾನೊಂದೆವಲಂ'** ಎಂಬ ನಮ್ಮ ಆದಿಕವಿಯ ಆಶಯ ಗಗನ ಕುಸುಮವೆಂದೇ ತೋರುತ್ತದೆ. ಆದರೂ ಈ ಕಗ್ಗತ್ತಲೆಯಿಂದ ಬೆಳಕಿನತ್ತ ನಮ್ಮ ದೇಶ ಸಾಗುತ್ತಿದೆ ಎಂಬ ಆಸೆಯನ್ನು ಹೊತ್ತು ಸಾಗುತ್ತೇವೆ.

ಆ ದಿವ್ಯಚೇತನಕ್ಕೆ ನಾವು ಸಲ್ಲಿಸುವ ನಮನ ಇದು : "ಪಾಹಿಮಾಂ ಶರಣು ಶಿವಕುಮಾರ; ಪಾಹಿಮಾಂ ಶರಣು ಶಿವಕುಮಾರ; ಶರಣು ಪಾಹಿಮಾಂ"

ಸ್ಮರಣೆ

# ಆಧ್ಯಾತ್ಮಿಕ ಸಾಧನೆಯ ಮೇರುಶಿಖರ
# ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು

– ಡಾ. ಡಿ. ಮಂಗಳಾ ಪ್ರಿಯದರ್ಶಿನಿ *

'ಮಠಗಳು' ಎಂದಿನಿಂದಲೂ ಧಾರ್ಮಿಕ ಆಸಕ್ತಿಯೊಂದಿಗೆ ಸಾಮಾಜಿಕ ಕಳಕಳಿಯನ್ನು ವ್ಯಕ್ತಪಡಿಸುತ್ತಲೇ ಬಂದಿವೆ. ಒಂದು ಕಾಲದಲ್ಲಿ ಮಠಗಳು ಸನ್ಯಾಸಿಗಳ, ವಿರಕ್ತರ ಆಧ್ಯಾತ್ಮಿಕ ಹಾಗೂ ವೈರಾಗ್ಯ ಸಾಧನೆಗಳ ಕೇಂದ್ರಗಳಾಗಿದ್ದವು. ಇವು ಸಾಮಾನ್ಯವಾಗಿ ಪ್ರಶಾಂತವಾದ ವಾತಾವರಣದಲ್ಲಿ ಏಕಾಂತತೆಯನ್ನು ಸಾಧ್ಯವೆನಿಸುವ ಪರಿಸರದಲ್ಲಿರುತ್ತಿದ್ದವು. ಅವುಗಳನ್ನು 'ಆಶ್ರಮ'ಗಳೆಂದೂ ಕರೆಯಲಾಗುತ್ತಿತ್ತು. ಹಿಂದೂ ಧರ್ಮದ ಬದುಕಿನ ನಾಲ್ಕು ಹಂತಗಳಲ್ಲಿ ಕಟ್ಟಕಡೆಯ ವಾನಪ್ರಸ್ಥಾಶ್ರಮಕ್ಕೆ ಬಹಳ ಪ್ರಾಮುಖ್ಯತೆ ನೀಡಲಾಗುತ್ತಿತ್ತು. ಲೌಕಿಕ ಜೀವನದಿಂದ ಪಲ್ಲಟಗೊಂಡು ಆಧ್ಯಾತ್ಮಿಕ ಸಾಧನೆ, ಅಂತರಂಗದ ಅರಿವಿಗೆ ಮನುಷ್ಯ ಪ್ರಯತ್ನಿಸಬೇಕೆಂಬ ಆಶಯ ಇದರ ಹಿನ್ನೆಲೆಯಲ್ಲಿತ್ತು. ಹಾಗೆಯೇ ಗುರುಕುಲಗಳಿದ್ದವು, ವಿದ್ಯೆಯನ್ನು ಕಲಿಯಬೇಕಾದರೆ ಗುರು ಬಹಳ ಮುಖ್ಯ ಎಂದು ಭಾವಿಸಲಾಗಿತ್ತು. ಇಂತಹ ಗುರುಕುಲಗಳು, ಆಶ್ರಮಗಳನ್ನು ಅರಸಿ ಬರುವ ಶಿಷ್ಯರಿಗೆ ವಿದ್ಯೆಯನ್ನು ನೀಡುತ್ತಿದ್ದರು. ಇಲ್ಲಿ ದೊರಕುತ್ತಿದ್ದ ವಿದ್ಯೆ ಕೇವಲ ಲೌಕಿಕ ಬದುಕಿಗೆ ಮಾತ್ರ ಸಂಬಂಧಪಟ್ಟುದಾಗಿರುತ್ತಿರಲಿಲ್ಲ. ಅವು ಆಧ್ಯಾತ್ಮಿಕ, ಅಂತರಂಗದ ಜಗತ್ತನ್ನು ಹಸನುಗೊಳಿಸುವ ಪಾರಮಾರ್ಥಿಕ, ನೈತಿಕ, ಧಾರ್ಮಿಕ ತಿಳುವಳಿಕೆಗಳಾಗಿದ್ದವು. ಹೀಗಾಗಿ, ಇಂತಹ ಧಾರ್ಮಿಕ, ಆಧ್ಯಾತ್ಮಿಕ, ಪಾರಮಾರ್ಥಿಕ ಜ್ಞಾನವನ್ನು ನೀಡುವ ಕೇಂದ್ರಗಳಾಗಿ ಸಮಾಜದಲ್ಲಿ ಮಠಗಳು ಸ್ಥಾಪಿತವಾದವು.

ಕನ್ನಡ ನಾಡಿನಲ್ಲಿ ಮಠಗಳಿಗೊಂದು ಸುದೀರ್ಘ ಇತಿಹಾಸವಿದೆ. ಅದರಲ್ಲೂ ವೀರಶೈವ ಮಠಗಳು – ಕ್ರಿ.ಶ. ಆರನೆಯ ಶತಮಾನಕ್ಕಿಂತ ಹಿಂದೆಯೇ ಆಗಮ ಪ್ರಾಮಾಣ್ಯದ ರೀತಿಯಲ್ಲಿ ವೀರಶೈವ ಪಂಚಾಚಾರ್ಯರ ಮಠಗಳಿದ್ದವು. ಬಾದಾಮಿ ಪ್ರದೇಶದಲ್ಲಿ ಅತ್ಯಂತ ಪ್ರಾಚೀನ ಲಾಕುಳ ಶೈವ ದೇವಾಲಯವಿದ್ದು, ಇದನ್ನು 'ಮಹಾಕೂಟೇಶ್ವರ' ಅಥವಾ 'ಮುಕುಟೇಶ್ವರ' ಎಂದು ಗುರುತಿಸಲಾಗಿದೆ. ಇದರ ಕಾಲ ಕ್ರಿ.ಶ. ೬೦೩. ಎಂದರೆ ಈ ವೇಳೆಗಾಗಲೇ ಕನ್ನಡ ನಾಡಿನಲ್ಲಿ ಶೈವಧರ್ಮ ತುಂಬ ಜನಪ್ರಿಯವಾಗಿತ್ತು. ಈ ಶೈವದೇವಾಲಯಗಳು, ಮಠಗಳಿಗೆ ನಿಕಟವಾಗಿದ್ದು ಮಠಗಳು ದೇವಾಲಯಗಳ ಒಂದು ಪ್ರಮುಖ ಭಾಗವೇ ಆಗಿದ್ದವು. ಹೀಗಾಗಿ ಮಠಗಳು ಧಾರ್ಮಿಕ ಹಾಗೂ ಶೈಕ್ಷಣಿಕ ಕೇಂದ್ರಗಳಾಗಿ ದುಡಿದಿವೆ. ಇದಕ್ಕೂ ಮುಂಚೆ ಬೌದ್ಧ, ಜೈನ ಮಠಗಳು ಈ ಕೆಲಸ ಮಾಡಿದ್ದವು.

ಕರ್ನಾಟಕದಲ್ಲಿ ಹನ್ನೆರಡನೆಯ ಶತಮಾನದಲ್ಲಿ ಬಂದ ಶಿವಶರಣರು, ಬಸವಣ್ಣನವರ ನೇತೃತ್ವದಲ್ಲಿ ಇಂತಹ 'ಜ್ಞಾನ ಜಿಜ್ಞಾಸು ಕೇಂದ್ರ'ವನ್ನು ಸ್ಥಾಪಿಸಿದರು. ಅನ್ನದಾಸೋಹ, ಜ್ಞಾನದಾಸೋಹ ಹಾಗೂ ಕಾಯಕ ದಾಸೋಹಗಳು ಇದರ ಮುಖ್ಯ ಗುರಿಯಾಯಿತು. ಈ ಶತಮಾನದಲ್ಲಿ ಬಸವಣ್ಣನವರು ಧಾರ್ಮಿಕ, ಆಧ್ಯಾತ್ಮಿಕ ಎಚ್ಚರದೊಂದಿಗೆ ಸಾಮಾಜಿಕವಾಗಿ ಜಾಗೃತರಾದರು. ಸಮಾಜದ ಅನಿಷ್ಟ ಪದ್ಧತಿಯಾದ ಅಸಮಾನತೆಯೊಂದಿಗೆ ಹೋರಾಟ ಮಾಡಿದರು. ಮುಖ್ಯವಾಗಿ ಜಾತಿಪ್ರಜ್ಞೆ, ವರ್ಣಪ್ರಜ್ಞೆ, ಲೈಂಗಿಕ ತಾರತಮ್ಯ ಪ್ರಜ್ಞೆಯನ್ನು ತೀವ್ರವಾಗಿ ವಿರೋಧಿಸಿದರು. ಹಸಿದು ಬಂದವನಿಗೆ ಅನ್ನಿವಿಟ್ಟು, ಬರಿದಾದ ಬುದ್ಧಿ, ಹೃದಯಗಳಿಗೆ ಮಾನವತೆಯ ಪ್ರಜ್ಞೆಯನ್ನು ತುಂಬಿ, ಅವರಿಗೆ ಕಣ್ಣು ಕೊಟ್ಟರು, ಕಿವಿ ತೆರೆಸಿದರು, ಬಾಯಿ ಬಿಡಿಸಿದರು. ಸುತ್ತಲ ಸಮಾಜವನ್ನು ಕಾಣುವ, ಹೆರರ ನೋವು ಆಕ್ರಂದನಗಳನ್ನು ಕೇಳಿಸಿಕೊಳ್ಳುವ, ಅದಕ್ಕಾಗಿ ಮರುಗಿ ಧಾವಿಸುವಂತಹ ಭಾವನೆಗಳನ್ನು ಹುಟ್ಟುಹಾಕಿದ್ದಾರೆ.

* ಬಸವೇಶ್ವರನಗರ, ಬೆಂಗಳೂರು



ಈ ಶತಮಾನದಲ್ಲಿಯೂ ಅಂತರಂಗದ ವೈಯ್ಯಕ್ತಿಕ ಸಾಧನೆಗಳ ಜೊತೆ ಜೊತೆಯಲ್ಲಿಯೇ ಸಾಮಾಜಿಕ ಸಮಸ್ಯೆಗಳಿಗೆ ಮಿಡಿಯುವ, ಮರುಗುವ, ಸ್ಪಂದಿಸುವ ಆಧುನಿಕ ಬಸವಣ್ಣರಿದ್ದಾರೆ. ಶ್ರೀ ಸಿದ್ಧಗಂಗಾ ಕ್ಷೇತ್ರದ ಶ್ರೀ ಶ್ರೀ ಸ್ವಾಮೀಜಿಯವರು; ೧೨ನೇ ಶತಮಾನದ ಬಸವಣ್ಣನವರು ವ್ಯಕ್ತಪಡಿಸಿದ ಕಾಳಜಿಗಳನ್ನು ಮನಗಂಡು ಈ ಶತಮಾನದ ನೋವು, ಸಮಸ್ಯೆಗಳಿಗೆ ಸ್ಪಂದಿಸುತ್ತಾ, 'ಆಧುನಿಕ ಬಸವಣ್ಣ'ನವರಾಗಿದ್ದಾರೆ. ಶ್ರೀಗಳವರು ಧಾರ್ಮಿಕ, ಸಾಮಾಜಿಕ ಹಾಗೂ ಸಾಹಿತ್ಯಿಕ ಕ್ಷೇತ್ರಗಳಿಗೆ ನೀಡಿರುವ ಕೊಡುಗೆ, ಈ ಕ್ಷೇತ್ರಗಳಲ್ಲಿ ಅವರು ಸಾಧಿಸಿರುವ ಸಾಧನೆ ಅನುಪಮವಾದುದು.



ಶ್ರೀ ಸಿದ್ಧಗಂಗಾ ಕ್ಷೇತ್ರ ಕನ್ನಡ ನಾಡಿನ ಅತ್ಯಂತ ಪವಿತ್ರ ಯಾತ್ರಾ ಸ್ಥಳಗಳಲ್ಲೊಂದು. ಇಲ್ಲಿ ತ್ರಿವಿಧ ದಾಸೋಹ ಅನಾದಿ ಕಾಲದಿಂದಲೂ ನಡೆದು ಬಂದಿದೆ. ಶ್ರೀಕ್ಷೇತ್ರವಿರುವುದೇ ಅತ್ಯಂತ ಸುಂದರ ಪರಿಸರದಲ್ಲಿ. ಸುತ್ತ ಬೆಟ್ಟಗಳ ಹಚ್ಚ ಹಸುರಿನ ತಪ್ಪಲಿನಲ್ಲಿ ಶ್ರೀಮಠದ ಕ್ಷೇತ್ರ ದೇವತೆಗಳಾದ ಶ್ರೀ ಸಿದ್ದಲಿಂಗೇಶ್ವರ ಹಾಗೂ ಸಿದ್ಧಗಂಗಮ್ಮನವರ ದೇವಾಲಯಗಳು ಪ್ರಶಾಂತವಾಗಿ ನಿಂತಿವೆ. ಹಿಂದೆ ಧರ್ಮ ಪ್ರಚಾರ ಮಾಡುತ್ತ ಬಂದ ಯತಿವರ್ಯರು ಬೆಟ್ಟದ ಗವಿಯಲ್ಲಿ ಮಲಗಿದ್ದಾಗ ಬಾಯಾರಿಕೆಯಾಯಿತಂತೆ. ಸುತ್ತ ಎಲ್ಲೂ ನೀರ್ದಾಣಗಳಿಲ್ಲದಾಗ, ತಮ್ಮ ದಿವ್ಯಜ್ಞಾನ, ದಿವ್ಯಶಕ್ತಿಗಳ ಮೂಲಕ ಬಂಡೆಯಲ್ಲಿಯೇ ನೀರು ಚಿಮ್ಮಿ ಬರುವಂತೆ ಮಾಡಿ ತಮ್ಮ ಹಾಗೂ ಸುತ್ತಲಿನವರ ಬಾಯಾರಿಕೆಯನ್ನು, ತೀರಿಸಿಕೊಳ್ಳುತ್ತಾರೆ. ಹೀಗೆ ಸಿದ್ಧಿಯಿಂದ ಇಳಿದು ಬಂದ, 'ಸಿದ್ಧವಾದ ಗಂಗೆ,' 'ಸಿದ್ಧಗಂಗೆ'ಯಾಯಿತು. ಕಾಲಾಂತರದಲ್ಲಿ ಹರದನಹಳ್ಳಿಯ ಗುರು ಪರಂಪರೆಯಲ್ಲಿ ಬಂದ ಹನ್ನೆರಡನೆಯ ಗುರುಗಳಾದ ಗೋಸಲ ಸಿದ್ದೇಶ್ವರರೇ ಸಿದ್ಧಗಂಗಾ ಮಠದ ಸಂಸ್ಥಾಪಕರೆಂದು ಹೇಳಲಾಗುತ್ತದೆ. ಇಂತಹ ಮಠ ಧರ್ಮ, ಶಿಕ್ಷಣ, ಸಂಸ್ಕೃತಿ ಪ್ರಸಾರ, ಸಮಾಜ ಸೇವೆಗಳ ಮೂಲಕ ಪ್ರಖ್ಯಾತವಾಗಿದೆ. ಇಂತಹ ಭುವನ ಗುರು ಪರಂಪರೆಯಲ್ಲಿ ಬಂದ ಡಾ. ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು ಮಠದ ಸ್ವರೂಪವನ್ನು ಸಂಪೂರ್ಣವಾಗಿ ಬದಲಿಸಿದ್ದರು. ಧರ್ಮ ಮತ್ತು ಸಮಾಜಗಳ ಅಂತರ್ಗತ ಸಂಬಂಧಗಳನ್ನು ಮನಗಂಡು ಅದನ್ನು ದೇಶವ್ಯಾಪೀ ನೆಲೆಯಿಂದ ವಿಶ್ವವ್ಯಾಪೀ ನೆಲೆಗೆ ಕೊಂಡೊಯ್ದಿದ್ದ ಹಳ್ಳಿಗಾಡಿನ ಶಾಲೆಯನ್ನು ವಿಶ್ವವಿದ್ಯಾಲಯವಾಗಿಸಿದ್ದವರು ಪೂಜ್ಯ ಶ್ರೀಗಳವರು.

ತುಮಕೂರು ಜಿಲ್ಲೆಯಲ್ಲಿನ ಯಾವ ಬಡವನ ಮನೆಯಲ್ಲೊಂದು ಕೂಸು ಹುಟ್ಟಿದರೂ ಇಂದು ಮರುಗುವುದಿಲ್ಲ. ಬದಲಿಗೆ, ಕಿತ್ತು ತಿನ್ನುವ ದಟ್ಟ ದಾರಿದ್ರ್ಯದಲ್ಲಿ ತಮ್ಮ ಮಗ ಏನೋ ಆಗಬಲ್ಲನೆಂಬ ನಂಬಿಕೆ ಇಂದು ಅನೇಕರ ಮನ ಮನೆಗಳಲ್ಲಿದೆ. ಶಾಲೆಗೆ ಕಳಿಸಲಾಗದೆ, ಮನೆಯಲ್ಲಿ ಮಗುವಿಗೆ ಹೊಟ್ಟೆತುಂಬ ಅನ್ನವಿಡಲಾರದೆ ಮರುಗುವ ತಂದೆ ತಾಯಿಯರಿಗೆ ಉಳಿಯುವುದೊಂದೇ ದಾರಿ. ಚಿಲಕವಿಲ್ಲದ ಮುರುಕು ಕಬ್ಬಿಣದ ಪೆಟ್ಟಿಗೆಯಲ್ಲೋ ಅಥವಾ ಹರಿದ ಬಟ್ಟೆ ಚೀಲದಲ್ಲೋ ಒಂದು ಚಿಂದಿ ಅಂಗಿ, ಒಂದು ಚಡ್ಡಿ ತುರುಕಿ ಪ್ರೀತಿಯಿಂದ ಕಣ್ಣೀರು ಸುರಿಸುತ್ತ ತಬ್ಬಿ, ತಲೆಯ ಮೇಲೆ ಕೈಯಿಟ್ಟು ಹರಸಿಕಳಿಸುವ ಹರುಕುಸೀರೆಯ ತಾಯಿ,

ಬಸ್ ಟಿಕೆಟ್ಟಿಗೂ ಗತಿಯಿಲ್ಲದೆ ಹೆರವರ ಮನೆಯಿಂದ ಕೈಸಾಲ ಪಡೆದು ಮಗನ ಕೈಬೆರಳನ್ನು ಜತನವಾಗಿ ಹಿಡಿದು ಭಾರದ ಹೆಜ್ಜೆಯೊಂದಿಗೆ ಬರಿಗಾಲಿನಲ್ಲಿ ಬಸ್‌ಸ್ಟಾಪಿಗೆ ಬರುವ ತಂದೆ, ಮಗ ಕಾಯುವುದು, ಹತ್ತುವ ಬಸ್ಸು ಒಂದೆ – ಸಿದ್ಧಗಂಗೆಗೆ. ಇಂತಹ ಸಾವಿರಾರು ತಂದೆ, ತಾಯಿಗಳ ಕೈಹಿಡಿದು ಅಸಹಾಯಕರಾಗಿ ಆಗಮಿಸುವ ಬಡಮಕ್ಕಳನ್ನು ಪ್ರೀತಿಯಿಂದ ಎರಡೂ ಕೈಗಳಿಂದ ಬಾಚಿ ತಬ್ಬಿಕೊಳ್ಳುವ ಶ್ರೀಗಳು ಯಾವ ಮಗುವಿಗೂ ಅನಾಥತ್ವದ ಭಾವವಾಗಲಿ, ಬಡತನದ ಬೇಗೆಯಾಗಲಿ, ಹಸಿವಿನ ಸಂಕಷ್ಟಗಳಾಗಲಿ ತಾಕದಂತೆ ಕಾಪಿಟ್ಟುಕೊಂಡು ಬಂದಿದ್ದರು

ಈ ಬಡ ಮಕ್ಕಳಿಗೆ ಇರಲು ಬೆಚ್ಚನೆಯ ಸೂರು, ಉಡಲು ಬಟ್ಟೆ, ಹೊಟ್ಟೆ ತುಂಬ ಅನ್ನ ನೀಡುವುದರ ಜೊತೆಗೆ ಅವರಿಗೆ ಶಿಕ್ಷಣವನ್ನು ನೀಡುವ ಕಾಯಕ ನಿರಂತರವಾಗಿ ನಡೆದಿದೆ. ಈ ಮಕ್ಕಳಿಗೆ ಆರ್ಷೇಯ ಪರಂಪರೆ, ವೀರಶೈವ ಸಿದ್ಧಾಂತಗಳು, ಸಂಸ್ಕೃತ, ಕನ್ನಡ, ಇಂಗ್ಲೀಷ್ ಭಾಷೆಗಳನ್ನು ಕಲಿಸಲಾಗುತ್ತಿದೆ. ಮುಖ್ಯವಾಗಿ ನೈತಿಕ, ಧಾರ್ಮಿಕ, ಆಧ್ಯಾತ್ಮಿಕ, ದೈಹಿಕ ಶಿಕ್ಷಣಗಳನ್ನು ನೀಡಿ ವಿದ್ಯಾರ್ಥಿಗಳನ್ನು ದೈಹಿಕವಾಗಿ ಹಾಗೂ ಮಾನಸಿಕವಾಗಿ ದೃಢಗೊಳಿಸುವ ಕಾರ್ಯಗಳು ನಡೆಯುತ್ತ ಬಂದಿದೆ. ಇಲ್ಲಿನ "ವಿದ್ಯಾರ್ಥಿ ನಿಲಯ" ಗುರುಕುಲ ಸ್ವರೂಪ ಪಡೆದಿದ್ದು ಶಿಕ್ಷಕ ಹಾಗೂ ವಿದ್ಯಾರ್ಥಿಗಳ ಸಂಬಂಧ ಅರ್ಥಪೂರ್ಣತೆಯಿಂದ ತುಂಬಿರುವಂತಹದು, ಅತ್ಯಂತ ಆತ್ಮೀಯವಾಗಿರುವಂತಹದು.

ಇಲ್ಲಿ ಬರುವ ಮಕ್ಕಳ ಆಯ್ಕೆಗೆ ಯಾವುದೇ ಜಾತಿ, ಮತಗಳ ನಿರ್ಬಂಧವಿಲ್ಲ. ಅವಶ್ಯಕತೆಗೆ, ಅಗತ್ಯಗಳಿಗನುಗುಣವಾಗಿ ಅವರಿಗೆ ಅವಕಾಶ. ಸರ್ವರಿಗೂ ಶಿಕ್ಷಣ ಲಭ್ಯವಾಗಬೇಕು, ಪಡೆದ ಶಿಕ್ಷಣದಿಂದ ಸಚ್ಚಾರಿತ್ರ್ಯ ರೂಪುಗೊಳ್ಳಬೇಕು, ಇಂತಹ ಶಿಕ್ಷಣವನ್ನು ಪಡೆದ ವ್ಯಕ್ತಿ ಬಲಿಷ್ಠವಾದ ಸಮಾಜವನ್ನು ಕಟ್ಟುವುದಕ್ಕೇ ನೆರವಾಗಬೇಕು ಎಂಬ ಉದಾತ್ತ ಚಿಂತನೆಯಿದೆ.

ಆಧುನಿಕ ಯುಗದ ಅತ್ಯಂತ ಮುಖ್ಯ ಕಾಳಜಿಯಾದ ವಿದ್ಯಾಭ್ಯಾಸ, ವಿದ್ಯಾಪ್ರಸಾರದ ಕಡೆಗೆ ಶ್ರೀಮಠ ಹೆಚ್ಚು ಕಾಳಜಿಯನ್ನು ವಹಿಸಿದೆ. ಪ್ರಾಥಮಿಕ ಹಂತದಿಂದ ಹಿಡಿದು ಉನ್ನತ ತಾಂತ್ರಿಕ ಹಾಗೂ ವೈದ್ಯಕೀಯ ಕಾಲೇಜುಗಳನ್ನು ಸ್ಥಾಪಿಸಿದೆ. ಬಹುಪಾಲು ಗ್ರಾಮಾಂತರ ಪ್ರದೇಶಗಳ ಬಡ ಮಕ್ಕಳಿಗೆ ಆಧುನಿಕ ಶಿಕ್ಷಣ ಲಭ್ಯವಾಗುತ್ತಿದೆ. ಅವರ ಸಾಂಸ್ಕೃತಿಕ ಹಾಗೂ ಸಾಮಾಜಿಕ ಬದುಕಿಗೆ ತಿರುವು ಕೊಡುವ ಅನೇಕ ರಚನಾತ್ಮಕ ಕಾರ್ಯಕ್ರಮಗಳು ಸ್ವಾಮೀಜಿಯವರ ನೇತೃತ್ವದಲ್ಲಿ ನಿರಂತರವಾಗಿ ಹರಿದು ಬಂದಿದೆ.

ಏಕಾಂತದ ಜಿನುಗು, ಲೋಕಾಂತದ ಮೊರೆತದೊಂದಿಗೆ ಅವಿರತವಾಗಿ ಸಮಾಜದ ಏಳಿಗೆಗೆ ದುಡಿಯುತ್ತಿರುವ ಸ್ವಾಮೀಜಿಯವರ ಬೆನ್ನು ಈ ಲೋಕದ ಅಸಂಖ್ಯಾತ ಅಸಹಾಯಕರ ಭಾರ ಹೊತ್ತು, ಜವಾಬ್ದಾರಿ ಹೊತ್ತು ಬಾಗಿದೆ. ಈ ಹಿರಿಯರ ಹರೆಯದಲ್ಲೂ ಪ್ರಜ್ಞಾವಂತ ಬುದ್ಧಿ ಹೊತ್ತು ಪರರ ನೋವಿಗಾಗಿ ಮಿಡಿಯುವ ಮನಸ್ಸು ಅವರದು. **ಲೋಕದ ಎಲ್ಲ ಕಷ್ಟ ಕಾರ್ಪಣ್ಯಗಳನ್ನು ಸವೆಸಲೆಂದೇ ತಾವು ಹುಟ್ಟಿ ಬಂದಿದ್ದೇವೆ ಎಂದು ತುಡಿಯುವ ಹೃದಯವಂತರು, ಪರಮಜ್ಞಾನಿಗಳು, ಮಹಾಮಾನವತಾವಾದಿಗಳೂ ಆದ ಸಿದ್ಧಗಂಗೆಯ ಶ್ರೀ ಶ್ರೀ ಮಹಾಸ್ವಾಮಿಗಳು ಈ ಪೀಠವನ್ನು ಸ್ವೀಕರಿಸಿ ಒಂಭತ್ತು ದಶಕಗಳೇ ಸಂದಿವೆ. ಕನ್ನಡ ನಾಡಿನ ಈ ಸಿದ್ಧರ ಪೀಠ, ನಿಜದ ಅರ್ಥದಲ್ಲಿ 'ಶೂನ್ಯ ಸಿಂಹಾಸನ'ವಾಗಿದೆ, ತ್ರಿವಿಧ ದಾಸೋಹಗಳ ಆಗರವಾಗಿದೆ.**

**ತೊಂಭತ್ತು** ವರ್ಷಗಳು ವ್ಯಕ್ತಿಯ ಬದುಕಿನಲ್ಲಿ ಸಾಮಾನ್ಯ ಸಂಗತಿಯಲ್ಲ. ಆಯುಷ್ಯದ ಮುಕ್ಕಾಲು ಶತಮಾನದಲ್ಲಿ ಏನೂ ಸಾಧಿಸಲಿಲ್ಲ ಎಂದು ಕೊರಗುವ ಜನತೆಯ ನಡುವೆ ಪೀಠಾರೋಹಣ ಮಾಡಿಯೇ ತೊಂಭತ್ತು ವಸಂತಗಳನ್ನು ಸಾರ್ಥಕವಾಗಿ ಬಳಸಿಕೊಂಡಿರುವ ಸ್ವಾಮೀಜಿಯವರ ಸಮಾಜಪರ ಕಳಕಳಿಯನ್ನು ವರ್ಣಿಸಲು ಶಬ್ದಕೋಶ ಸೋಲುತ್ತದೆ, ಸಾಲದಾಗುತ್ತದೆ. **ಸ್ವಾಮೀಜಿಯವರು ಸಮಾಜದಿಂದ ಪಡೆದುಕೊಂಡಿದ್ದಕ್ಕಿಂತ ಸಮಾಜಕ್ಕೆ ಕೊಟ್ಟಿರುವುದೇ ಅಗಾಧ. ಸಮಾಜ ಋಣದಲ್ಲಿ ತಾವು ಬೀಳುವುದಕ್ಕಿಂತ ಹೆಚ್ಚಾಗಿ ಸಮಾಜವನ್ನು ತಮ್ಮ ಋಣದ ತೆಕ್ಕೆಯಲ್ಲಿ ಅದ್ದಿದ್ದಾರೆ.** ತಾವೇನೋ ಸಾಧಿಸಿದ್ದೇವೆಂಬ ಹಮ್ಮಿಲ್ಲದೆ, ಇಷ್ಟೆಲ್ಲ ಕಾರ್ಯಗಳು ತಮ್ಮ ಕಾರ್ಯಾಚರಣೆಯಲ್ಲೇ



ಸಮರ್ಪಕವಾಗಿ ನಡೆಯುತ್ತಿದೆ ಎಂಬುದನ್ನು ಗಣನೆಗೆ ತಂದುಕೊಳ್ಳದೆ, ಇವೆಲ್ಲದರ ಬಗ್ಗೆ ಯೋಚಿಸಲು ಸಮಯವಿಲ್ಲದೆ, ಬಡವರ, ನೊಂದವರ, ಸಂತ್ರಸ್ತರ, ನಿರಾಶ್ರಿತರ ಬದುಕಿನ ಉದ್ಧಾರಕ್ಕಾಗಿ ದುಡಿದ ಇಂತಹ ಮಹನೀಯರು ಸಾಕ್ಷಾತ್ ಗುರು-ಲಿಂಗ-ಜಂಗಮರು. 'ಕಾಯಕ'ದಲ್ಲಿಯೇ ಪೂಜ್ಯ ಸ್ವಾಮೀಜಿಯವರು 'ಸಿದ್ಧಗಂಗೆ'ಯನ್ನು ನಿಜದ ಅರ್ಥದಲ್ಲಿ ಸಾಧನೆಯ ಕರ್ಮಭೂಮಿ, ತಪೋಭೂಮಿಯಾಗಿ ಮಾಡಿಕೊಂಡು ಮಾನವ ಸೇವಾ ಸಿದ್ಧಿಯ ಪತಾಕೆಯನ್ನು ಹಾರಿಸಿದ ಮಹಾಪುರುಷರು.

ಇಂದು ಬಡವನ ಮನೆಯಲ್ಲಿ ಹುಟ್ಟಿದ ಮಗುವಿಗಾಗಿ ತಂದೆ, ತಾಯಿಯರು ಪರಿತಪಿಸಬೇಕಿಲ್ಲ. ಹಸಿದ ಹೊಟ್ಟೆಯಲ್ಲಿ ಹರಕು ಚೀಲ ಹೊತ್ತು ಸಿದ್ಧಗಂಗೆಯನ್ನು ಪ್ರವೇಶಿಸಿದರೆ ಎರಡು ದಶಕಗಳಲ್ಲೊಬ್ಬ ಪ್ರಜ್ಞಾವಂತ, ಬುದ್ಧಿವಂತ, ಕ್ರಿಯಾತ್ಮಕ ವ್ಯಕ್ತಿಯಾಗಿ ಹೊರ ಬೀಳಬಲ್ಲವನಾಗುತ್ತಾನೆ. ಹಳೆಪೆಟ್ಟಿಗೆ ಹೊತ್ತು ಹಸಿದು ಕಣ್ಣ್ರಾಲಾಗಿ ಶ್ರೀ ಸನ್ನಿಧಿಗೆ ಸೇರಿದ ಬಡ ಮಕ್ಕಳಿಗೆ ಸಮಾಜದ ಸಮರ್ಥ ವೈದ್ಯರು, ಇಂಜಿನಿಯರುಗಳು, ಕಲಾವಿದರು, ವಿಜ್ಞಾನಿಗಳು, ಸಾಹಿತಿಗಳು, ಕೈಗಾರಿಕೋದ್ಯಮಿಗಳು, ಶಿಕ್ಷಕರು..... ಹೀಗೆ ಏನೇನೋ ಆಗಿ ಸಮಾಜದಲ್ಲಿ ಗಣ್ಯಸ್ಥಾನಗಳನ್ನು ತುಂಬಿಕೊಂಡಿದ್ದಾರೆ. ದೇಶ, ವಿದೇಶಗಳ ತುಂಬ ಹರಡಿಕೊಂಡಿದ್ದಾರೆ. ಇಂತಹ ಯಾವುದೇ ವ್ಯಕ್ತಿಯ ಬದುಕನ್ನು ಕೆದಕಿದರೂ ಅವರ ಕಣ್ಮನಗಳು ತುಂಬಿ ಬರುತ್ತವೆ, ಕೃತಜ್ಞತೆಯ ಕಣ್ಣೀರು ಕಣ್ಣಂಚಿನಲ್ಲಿ ತುಳುಕುತ್ತವೆ. ಸ್ವಾಮೀಜಿಯವರ ಬಗ್ಗೆ ಶ್ರೀಮಠದ ಬಗ್ಗೆ ತುಂಬು ಗೌರವ ಉಕ್ಕಿ ಬರುತ್ತದೆ. ಇಂತಹ ಗಣ್ಯರು ಮಠಗಳಿಗೆ ಮರಳಿ ಬಂದಿದ್ದಾರೆ. ಔದಾರ್ಯದಿಂದ ತಮ್ಮ ಸಹಾಯ ಹಸ್ತ ಚಾಚಿದ್ದಾರೆ. ಇನ್ನಾವುದೋ ಹಳ್ಳಿಗಾಡಿನ ಮೂಲೆಯಿಂದ ಬದುಕಿನ ಬಗೆಗೆ ಭರವಸೆ ಕಳೆದುಕೊಂಡು ಬರುವ ಮತ್ತಾವುದೋ ಕಂದನಿಗೆ ಬೆಳಕು ನೀಡಿದ್ದಾರೆ. ಇಂತಹ ಲಕ್ಷಾಂತರ ಮನೆ, ಮನಗಳ ದೀಪ ಬೆಳಗಿದ ರತ್ನದೀಪ ಪರಮಪೂಜ್ಯ ಶ್ರೀಗಳು ಎಂದು ಹೇಳುವಾಗ ಧನ್ಯತಾಭಾವಸ್ಫುರಿಸುತ್ತದೆ.

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೦೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦೦/- ರೂ ಸಂದಾಯ ಮಾಡಬೇಕು. ೧೦೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ ನಗದು/ಚೆಕ್/ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (ಐಡಿ) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಾರ್ಡಿನಲ್ಲಿ ಬರೆದು ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ. ವಾರ್ಷಿಕ ಚಂದಾದಾರರು ತಮ್ಮ ಸದಸ್ಯತ್ವದ ಅವಧಿ ಮುಗಿದಿದ್ದರೆ ನವೀಕರಿಸಿಕೊಳ್ಳಬೇಕೆಂದು ಕೋರುತ್ತೇವೆ.

ಪ್ರಕಾಶಕರು,
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪.
ದೂರವಾಣಿ : ೦೮೧೬-೨೨೮೨೩೨೨

ಬಸ್ ಟಿಕೆಟ್ಟಿಗೂ ಗತಿಯಿಲ್ಲದೆ ಹೆರವರ ಮನೆಯಿಂದ ಕೈಸಾಲ ಪಡೆದು ಮಗನ ಕೈಬೆರಳನ್ನು ಜತನವಾಗಿ ಹಿಡಿದು ಭಾರದ ಹೆಜ್ಜೆಯೊಂದಿಗೆ ಬರಿಗಾಲಿನಲ್ಲಿ ಬಸ್‌ಸ್ಟಾಪಿಗೆ ಬರುವ ತಂದೆ, ಮಗ ಕಾಯುವುದು, ಹತ್ತುವ ಬಸ್ಸು ಒಂದೆ – ಸಿದ್ಧಗಂಗೆಗೆ. ಇಂತಹ ಸಾವಿರಾರು ತಂದೆ, ತಾಯಿಗಳ ಕೈಹಿಡಿದು ಅಸಹಾಯಕರಾಗಿ ಆಗಮಿಸುವ ಬಡಮಕ್ಕಳನ್ನು ಪ್ರೀತಿಯಿಂದ ಎರಡೂ ಕೈಗಳಿಂದ ಬಾಚಿ ತಬ್ಬಿಕೊಳ್ಳುವ ಶ್ರೀಗಳು ಯಾವ ಮಗುವಿಗೂ ಅನಾಥತ್ವದ ಭಾವವಾಗಲಿ, ಬಡತನದ ಬೇಗೆಯಾಗಲಿ, ಹಸಿವಿನ ಸಂಕಷ್ಟಗಳಾಗಲಿ ತಾಕದಂತೆ ಕಾಪಿಟ್ಟುಕೊಂಡು ಬಂದಿದ್ದರು.

ಈ ಬಡ ಮಕ್ಕಳಿಗೆ ಇರಲು ಬೆಚ್ಚನೆಯ ಸೂರು, ಉಡಲು ಬಟ್ಟೆ, ಹೊಟ್ಟೆ ತುಂಬ ಅನ್ನ ನೀಡುವುದರ ಜೊತೆಗೆ ಅವರಿಗೆ ಶಿಕ್ಷಣವನ್ನು ನೀಡುವ ಕಾಯಕ ನಿರಂತರವಾಗಿ ನಡೆದಿದೆ. ಈ ಮಕ್ಕಳಿಗೆ ಆರ್ಷೇಯ ಪರಂಪರೆ, ವೀರಶೈವ ಸಿದ್ಧಾಂತಗಳು, ಸಂಸ್ಕೃತ, ಕನ್ನಡ, ಇಂಗ್ಲೀಷ್ ಭಾಷೆಗಳನ್ನು ಕಲಿಸಲಾಗುತ್ತಿದೆ. ಮುಖ್ಯವಾಗಿ ನೈತಿಕ, ಧಾರ್ಮಿಕ, ಆಧ್ಯಾತ್ಮಿಕ, ದೈಹಿಕ ಶಿಕ್ಷಣಗಳನ್ನು ನೀಡಿ ವಿದ್ಯಾರ್ಥಿಗಳನ್ನು ದೈಹಿಕವಾಗಿ ಹಾಗೂ ಮಾನಸಿಕವಾಗಿ ದೃಢಗೊಳಿಸುವ ಕಾರ್ಯಗಳು ನಡೆಯುತ್ತ ಬಂದಿದೆ. ಇಲ್ಲಿನ "ವಿದ್ಯಾರ್ಥಿ ನಿಲಯ" ಗುರುಕುಲ ಸ್ವರೂಪ ಪಡೆದಿದ್ದು ಶಿಕ್ಷಕ ಹಾಗೂ ವಿದ್ಯಾರ್ಥಿಗಳ ಸಂಬಂಧ ಅರ್ಥಪೂರ್ಣತೆಯಿಂದ ತುಂಬಿರುವಂತಹದು, ಅತ್ಯಂತ ಆತ್ಮೀಯವಾಗಿರುವಂತಹದು.

ಇಲ್ಲಿ ಬರುವ ಮಕ್ಕಳ ಆಯ್ಕೆಗೆ ಯಾವುದೇ ಜಾತಿ, ಮತಗಳ ನಿರ್ಬಂಧವಿಲ್ಲ. ಅವಶ್ಯಕತೆಗೆ, ಅಗತ್ಯಗಳಿಗನುಗುಣವಾಗಿ ಅವರಿಗೆ ಅವಕಾಶ. ಸರ್ವರಿಗೂ ಶಿಕ್ಷಣ ಲಭ್ಯವಾಗಬೇಕು, ಪಡೆದ ಶಿಕ್ಷಣದಿಂದ ಸಚ್ಚಾರಿತ್ರ್ಯ ರೂಪುಗೊಳ್ಳಬೇಕು, ಇಂತಹ ಶಿಕ್ಷಣವನ್ನು ಪಡೆದ ವ್ಯಕ್ತಿ ಬಲಿಷ್ಠವಾದ ಸಮಾಜವನ್ನು ಕಟ್ಟುವುದಕ್ಕೇ ನೆರವಾಗಬೇಕು ಎಂಬ ಉದಾತ್ತ ಚಿಂತನೆಯಿದೆ.

ಆಧುನಿಕ ಯುಗದ ಅತ್ಯಂತ ಮುಖ್ಯ ಕಾಳಜಿಯಾದ ವಿದ್ಯಾಭ್ಯಾಸ, ವಿದ್ಯಾಪ್ರಸಾರದ ಕಡೆಗೆ ಶ್ರೀಮಠ ಹೆಚ್ಚು ಕಾಳಜಿಯನ್ನು ವಹಿಸಿದೆ. ಪ್ರಾಥಮಿಕ ಹಂತದಿಂದ ಹಿಡಿದು ಉನ್ನತ ತಾಂತ್ರಿಕ ಹಾಗೂ ವೈದ್ಯಕೀಯ ಕಾಲೇಜುಗಳನ್ನು ಸ್ಥಾಪಿಸಿದೆ. ಬಹುಪಾಲು ಗ್ರಾಮಾಂತರ ಪ್ರದೇಶಗಳ ಬಡ ಮಕ್ಕಳಿಗೆ ಆಧುನಿಕ ಶಿಕ್ಷಣ ಲಭ್ಯವಾಗುತ್ತಿದೆ. ಅವರ ಸಾಂಸ್ಕೃತಿಕ ಹಾಗೂ ಸಾಮಾಜಿಕ ಬದುಕಿಗೆ ತಿರುವು ಕೊಡುವ ಅನೇಕ ರಚನಾತ್ಮಕ ಕಾರ್ಯಕ್ರಮಗಳು ಸ್ವಾಮೀಜಿಯವರ ನೇತೃತ್ವದಲ್ಲಿ ನಿರಂತರವಾಗಿ ಹರಿದು ಬಂದಿದೆ.

ಏಕಾಂತದ ಜಿನುಗು, ಲೋಕಾಂತದ ಮೊರೆತದೊಂದಿಗೆ ಅವಿರತವಾಗಿ ಸಮಾಜದ ಏಳಿಗೆಗೆ ದುಡಿಯುತ್ತಿರುವ ಸ್ವಾಮೀಜಿಯವರ ಬೆನ್ನು ಈ ಲೋಕದ ಅಸಂಖ್ಯಾತ ಅಸಹಾಯಕರ ಭಾರ ಹೊತ್ತು ಜವಾಬ್ದಾರಿ ಹೊತ್ತು ಬಾಗಿದೆ. ಈ ೧೧೦ರ ಹರೆಯದಲ್ಲೂ ಪ್ರಜ್ಞಾವಂತ ಬುದ್ಧಿ ಹೊತ್ತು ಪರರ ನೋವಿಗಾಗಿ ಮಿಡಿಯುವ ಮನಸ್ಸು ಅವರದು. **ಲೋಕದ ಎಲ್ಲ ಕಷ್ಟ ಕಾರ್ಪಣ್ಯಗಳನ್ನು ಸವೆಸಲೆಂದೇ ತಾವು ಹುಟ್ಟಿ ಬಂದಿದ್ದೇವೆ ಎಂದು ತುಡಿಯುವ ಹೃದಯವಂತರು, ಪರಮಜ್ಞಾನಿಗಳು, ಮಹಾಮಾನವತಾವಾದಿಗಳೂ ಆದ ಸಿದ್ಧಗಂಗೆಯ ಶ್ರೀ ಶ್ರೀ ಮಹಾಸ್ವಾಮಿಗಳು ಈ ಪೀಠವನ್ನು ಸ್ವೀಕರಿಸಿ ಒಂಭತ್ತು ದಶಕಗಳೇ ಸಂದಿವೆ. ಕನ್ನಡ ನಾಡಿನ ಈ ಸಿದ್ಧರ ಪೀಠ, ನಿಜದ ಅರ್ಥದಲ್ಲಿ 'ಶೂನ್ಯ ಸಿಂಹಾಸನ'ವಾಗಿದೆ, ತ್ರಿವಿಧ ದಾಸೋಹಗಳ ಆಗರವಾಗಿದೆ.**

ತೊಂಭತ್ತು ವರ್ಷಗಳು ವ್ಯಕ್ತಿಯ ಬದುಕಿನಲ್ಲಿ ಸಾಮಾನ್ಯ ಸಂಗತಿಯಲ್ಲ. ಆಯುಷ್ಯದ ಮುಕ್ಕಾಲು ಶತಮಾನದಲ್ಲಿ ಏನೂ ಸಾಧಿಸಲಿಲ್ಲ ಎಂದು ಕೊರಗುವ ಜನತೆಯ ನಡುವೆ ಪೀಠಾರೋಹಣ ಮಾಡಿಯೇ ತೊಂಭತ್ತು ವಸಂತಗಳನ್ನು ಸಾರ್ಥಕವಾಗಿ ಬಳಸಿಕೊಂಡಿರುವ ಸ್ವಾಮೀಜಿಯವರ ಸಮಾಜಪರ ಕಳಕಳಿಯನ್ನು ವರ್ಣಿಸಲು ಶಬ್ದಕೋಶ ಸೋಲುತ್ತದೆ, ಸಾಲದಾಗುತ್ತದೆ. **ಸ್ವಾಮೀಜಿಯವರು ಸಮಾಜದಿಂದ ಪಡೆದುಕೊಂಡಿದ್ದಕ್ಕಿಂತ ಸಮಾಜಕ್ಕೆ ಕೊಟ್ಟಿರುವುದೇ ಅಗಾಧ. ಸಮಾಜ ಋಣದಲ್ಲಿ ತಾವು ಬೀಳುವುದಕ್ಕಿಂತ ಹೆಚ್ಚಾಗಿ ಸಮಾಜವನ್ನು ತಮ್ಮ ಋಣದ ತೆಕ್ಕೆಯಲ್ಲಿ** ಅದ್ದಿದ್ದಾರೆ. ತಾವೇನೋ ಸಾಧಿಸಿದ್ದೇವೆಂಬ ಹಮ್ಮಿಲ್ಲದೆ, ಇಷ್ಟೆಲ್ಲ ಕಾರ್ಯಗಳು ತಮ್ಮ ಕಾರ್ಯಾಚರಣೆಯಲ್ಲೇ



ಸಮರ್ಪಕವಾಗಿ ನಡೆಯುತ್ತಿದೆ ಎಂಬುದನ್ನು ಗಣನೆಗೆ ತಂದುಕೊಳ್ಳದೆ, ಇವೆಲ್ಲದರ ಬಗ್ಗೆ ಯೋಚಿಸಲು ಸಮಯವಿಲ್ಲದೆ, ಬಡವರ, ನೊಂದವರ, ಸಂತ್ರಸ್ತರ, ನಿರಾಶ್ರಿತರ ಬದುಕಿನ ಉದ್ಧಾರಕ್ಕಾಗಿ ದುಡಿದ ಇಂತಹ ಮಹನೀಯರು ಸಾಕ್ಷಾತ್ ಗುರು-ಲಿಂಗ-ಜಂಗಮರು. 'ಕಾಯಕ'ದಲ್ಲಿಯೇ ಪೂಜ್ಯ ಸ್ವಾಮೀಜಿಯವರು 'ಸಿದ್ಧಗಂಗೆ'ಯನ್ನು ನಿಜದ ಅರ್ಥದಲ್ಲಿ ಸಾಧನೆಯ ಕರ್ಮಭೂಮಿ, ತಪೋಭೂಮಿಯಾಗಿ ಮಾಡಿಕೊಂಡು ಮಾನವ ಸೇವಾ ಸಿದ್ಧಿಯ ಪತಾಕೆಯನ್ನು ಹಾರಿಸಿದ ಮಹಾಪುರುಷರು.

ಇಂದು ಬಡವನ ಮನೆಯಲ್ಲಿ ಹುಟ್ಟಿದ ಮಗುವಿಗಾಗಿ ತಂದೆ, ತಾಯಿಯರು ಪರಿತಪಿಸಬೇಕಿಲ್ಲ. ಹಸಿದ ಹೊಟ್ಟೆಯಲ್ಲಿ ಹರಕು ಚೀಲ ಹೊತ್ತು ಸಿದ್ಧಗಂಗೆಯನ್ನು ಪ್ರವೇಶಿಸಿದರೆ ಎರಡು ದಶಕಗಳಲ್ಲೊಬ್ಬ ಪ್ರಜ್ಞಾವಂತ, ಬುದ್ಧಿವಂತ, ಕ್ರಿಯಾತ್ಮಕ ವ್ಯಕ್ತಿಯಾಗಿ ಹೊರ ಬೀಳಬಲ್ಲವನಾಗುತ್ತಾನೆ. ಹಳೆಪಟ್ಟಿಗೆ ಹೊತ್ತು ಹಸಿದು ಕಂಗಾಲಾಗಿ ಶ್ರೀ ಸನ್ನಿಧಿಗೆ ಸೇರಿದ ಬಡ ಮಕ್ಕಳಿಗೆ ಸಮಾಜದ ಸಮರ್ಥ ವೈದ್ಯರು, ಇಂಜಿನಿಯರುಗಳು, ಕಲಾವಿದರು, ವಿಜ್ಞಾನಿಗಳು, ಸಾಹಿತಿಗಳು, ಕೈಗಾರಿಕೋದ್ಯಮಿಗಳು, ಶಿಕ್ಷಕರು..... ಹೀಗೆ ಏನೇನೋ ಆಗಿ ಸಮಾಜದಲ್ಲಿ ಗಣ್ಯಸ್ಥಾನಗಳನ್ನು ತುಂಬಿಕೊಂಡಿದ್ದಾರೆ. ದೇಶ, ವಿದೇಶಗಳ ತುಂಬ ಹರಡಿಕೊಂಡಿದ್ದಾರೆ. ಇಂತಹ ಯಾವುದೇ ವ್ಯಕ್ತಿಯ ಬದುಕನ್ನು ಕೆದಕಿದರೂ ಅವರ ಕಣ್ಮನಗಳು ತುಂಬಿ ಬರುತ್ತವೆ, ಕೃತಜ್ಞತೆಯ ಕಣ್ಣೀರು ಕಣ್ಣಂಚಿನಲ್ಲಿ ತುಳುಕುತ್ತವೆ. ಸ್ವಾಮೀಜಿಯವರ ಬಗ್ಗೆ ಶ್ರೀಮಠದ ಬಗ್ಗೆ ತುಂಬು ಗೌರವ ಉಕ್ಕಿ ಬರುತ್ತದೆ. ಇಂತಹ ಗಣ್ಯರು ಮಠಗಳಿಗೆ ಮರಳಿ ಬಂದಿದ್ದಾರೆ. ಔದಾರ್ಯದಿಂದ ತಮ್ಮ ಸಹಾಯ ಹಸ್ತ ಚಾಚಿದ್ದಾರೆ. ಇನ್ನಾವುದೋ ಹಳ್ಳಿಗಾಡಿನ ಮೂಲೆಯಿಂದ ಬದುಕಿನ ಬಗೆಗೆ ಭರವಸೆ ಕಳೆದುಕೊಂಡು ಬರುವ ಮತ್ತಾವುದೋ ಕಂದನಿಗೆ ಬೆಳಕು ನೀಡಿದ್ದಾರೆ. ಇಂತಹ ಲಕ್ಷಾಂತರ ಮನೆ, ಮನಗಳ ದೀಪ ಬೆಳಗಿದ ರತ್ನದೀಪ ಪರಮಪೂಜ್ಯ ಶ್ರೀಗಳು ಎಂದು ಹೇಳುವಾಗ ಧನ್ಯತಾಭಾವಸ್ಫುರಿಸುತ್ತದೆ.

## ‘ಸಿದ್ಧಗಂಗಾ’ ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ ನಗದು/ಚೆಕ್/ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (ಐಡಿ) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಾರ್ಡಿನಲ್ಲಿ ಬರೆದು ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ. ವಾರ್ಷಿಕ ಚಂದಾದಾರರು ತಮ್ಮ ಸದಸ್ಯತ್ವದ ಅವಧಿ ಮುಗಿದಿದ್ದರೆ ನವೀಕರಿಸಿ ಕೊಳ್ಳಬೇಕೆಂದು ಕೋರುತ್ತೇವೆ.

ಪ್ರಕಾಶಕರು,
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪.
ದೂರವಾಣಿ : ೦೮೧೬-೨೨೮೨೩೨೨

ಲೇಖನ

# ಶರಣರು ಕಂಡ ಬದುಕಿನ ಅರ್ಥ

– ಟಿ.ಆರ್. ಮಹಾದೇವಯ್ಯ *

ಕರ್ನಾಟಕದ ಇತಿಹಾಸದಲ್ಲಿ ಹನ್ನೆರಡನೆಯ ಶತಮಾನ ವೆಂದರೆ ನವಜಾಗೃತಿಯ ಕಾಲ. ಅಂದು ನಾಡಿನಲ್ಲೆಲ್ಲಾ ಪ್ರವಹಿಸಿದ ಬೆಳಕಿನ ಪ್ರವಾಹದ ಗಂಗೋತ್ರಿ ಮೂಡಿದ್ದು ಶರಣರ ಸಂಪನ್ನ ಹೃದಯದಲ್ಲಿ. ವಿಶ್ವವಿಶಾಲ ದೃಷ್ಟಿಯ, ಸಕಲ ಜೀವಿಗಳ ಕಲ್ಯಾಣವನ್ನು ಸದಾ ಚಿಂತಿಸುವ ಮನದ, ತನ್ನಂತೆ ಪರರ ಬಗೆವ ಉದಾತ್ತಗುಣದ, ಶಿವಶರಣರದು ಆದರ್ಶ ಜೀವನ. ಅವರು ಕಂಡುಕೊಂಡ ಬದುಕಿನ ದಾರಿ, ಅದನ್ನು ಅವರು ಸಾಕ್ಷಾತ್ಕರಿಸಿಕೊಂಡ ರೀತಿ–ಇವುಗಳನ್ನು ಕುರಿತು ವಿವೇಚಿಸುವುದೇ ಈ ಲೇಖನದ ಗುರಿ.

ನಾಲ್ಕು ಜನರ ನಡುವೆ ಬಾಳಿ ಬದುಕಬೇಕಾದ ಮನುಷ್ಯ ಹೇಗಿದ್ದರೆ ತಾನೂ ಬದುಕಿ, ಇನ್ನುಳಿದವರನ್ನೂ ಬದುಕಗೊಡುವುದು ಸಾಧ್ಯವೆಂಬುದನ್ನು ಕುರಿತು ಪ್ರಜ್ಞಾವಂತರೆಲ್ಲರೂ ಚಿಂತಿಸುತ್ತಾ ಬಂದಿದ್ದಾರೆ. ಆ ಚಿಂತನೆಯಲ್ಲಿ ಮನುಷ್ಯನ ಬದುಕಿನ ಗೊತ್ತು–ಗುರಿಗಳ ನಿರ್ದೇಶ, ಬಾಳ ಆದರ್ಶ, ಅರ್ಥಪೂರ್ಣ ಬದುಕಿನ ಸಾರ್ಥಕತೆ ಮೊದಲಾದ ಮೌಲ್ಯವುಳ್ಳ ವಿವೇಚನೆ ಕಂಡು ಬರುತ್ತದೆ. ಮಾನವ ಇತಿಹಾಸದ ಪುಟಗಳನ್ನು ತೆರೆಯುತ್ತಾ ಬಂದಂತೆ, ಕಾಲಕಾಲಕ್ಕೆ ಬದುಕಿನ ಅರ್ಥ ಬದಲಾಗುತ್ತಾ ಬಂದ ನಿದರ್ಶನಗಳನ್ನು ಕಾಣುತ್ತೇವೆ. ಯಾವಾಗ ಮನುಷ್ಯ ಬದುಕನ್ನು ಸಮರ್ಪಕವಾಗಿ ಅರ್ಥ ಮಾಡಿಕೊಂಡು ತುಂಬು ಬಾಳನ್ನು ಬಾಳಿದನೋ, ಆಗ ಉನ್ನತ ಮಟ್ಟದ ಸಂಸ್ಕೃತಿ, ಶಾಂತಿ–ನೆಮ್ಮದಿ ಮೂಡಿದೆ. ಎಲ್ಲಿ ಮನುಷ್ಯ ಬದುಕಿಗೆ ಅಪಾರ್ಥ ಕಲ್ಪಿಸಿ, ತಾನು ದಾರಿತಪ್ಪುವುದಲ್ಲದೆ, ಉಳಿದವರನ್ನೂ ಅಡ್ಡ ಹಾದಿ ಹಿಡಿಸಿದ್ದಾನೋ, ಅಲ್ಲಿ ಬದುಕು ಅರ್ಥಶೂನ್ಯವೆನಿಸಿ, ಅಶಾಂತಿ–ಜಿಗುಪ್ಸೆಗಳು ತಾಂಡವಾಡಿವೆ. ಈ ಏಳು ಬೀಳಿನ ಚಿತ್ರ ಮನುಷ್ಯನು ಬದುಕನ್ನು ಅರ್ಥ ಮಾಡಿಕೊಳ್ಳುವಲ್ಲಿ ನಡೆಸಿದ ಸಫಲಾಸಫಲ ಪ್ರಯತ್ನದ ದ್ಯೋತಕವಾಗಿದೆ.

## ನೀತಿ–ನಿಯಮ :

ಮನುಷ್ಯನಿಗೆ ಹಿರಿಯತನ ಬರುವುದು ಯಾವುದರಿಂದ ? ವಯಸ್ಸಿನಿಂದಲೇ, ಅವನ ಹುಟ್ಟಿನಿಂದಲೇ, ಪದವಿಯಿಂದಲೇ, ಸಂಪತ್ತಿನಿಂದಲೇ ? ಇವಾವುವೂ ಅಲ್ಲ. ಅವನ ಮಾನವೀಯ ಗುಣದಿಂದ, ಹೃದಯವಂತಿಕೆಯಿಂದ ; ಇವು ವ್ಯಕ್ತವಾಗುವ ಅವನ ಸಂಪನ್ನ ಬದುಕಿನಿಂದ. ಶರಣ ಜೀವನದಲ್ಲಿ ನಾವು ಮೊಟ್ಟಮೊದಲು ಕಾಣಬಹುದಾದುದು ಅವರ ಬದುಕಿನ ಬುನಾದಿಯಾಗಿರುವ ನೀತಿ. ತಮ್ಮ ಬಾಳು ದೇವರು ಮೆಚ್ಚುವಂತಿರಬೇಕು–ಲಿಂಗ ಮೆಚ್ಚಿ ಅಹುದು ಅಹುದು ಎನಬೇಕು. ಹಾಗೆ ಎರಡೇ ದಿನ ಬದುಕಿದರೂ ಸಾಕು ಎಂಬುದು ಅವರ ತೀರ್ಮಾನ : "ಅನ್ಯರ ಕೈಯಲ್ಲಿ ಅಲ್ಲ ಎನಿಸಿಕೊಂಬ ನಡೆ ನುಡಿಯೇಕೆ ? ಅಲ್ಲ ಎನಿಸಿಕೊಂಬುದರಿಂದ, ಆ ಕ್ಷಣ ಸಾವುದು ಲೇಸು ಕಾಣಾ" ಎಂದಿದ್ದಾಳೆ ಅಕ್ಕ.

ತಾನ್ನೊಬ್ಬನ ಸುಖ–ಸಂತೋಷ, ತನ್ನೊಬ್ಬನ ಉಳಿವು–ಉದ್ಧಾರ ದೊಡ್ಡದಲ್ಲ. ತನ್ನ ಜೊತೆಯಲ್ಲಿ ಬಾಳುವವರೂ ಸಂತೋಷದಿಂದಿರಬೇಕು, ಉದ್ಧಾರವಾಗಬೇಕು ಎಂಬುದು ಅವರ ಮನದಾಸೆ. ಅಂದರೆ ಪ್ರತಿ ವ್ಯಕ್ತಿ, ಆ ಮೂಲಕ ಇಡೀ ಸಮಾಜವೇ ವಿಕಾಸವಾಗಿ ಉನ್ನತಿಗೇರಬೇಕೆಂಬುದು ಅವರ ನಿರೀಕ್ಷೆ. ಅಂತೆಯೇ ತಮ್ಮ ಸಹಜೀವಿಗಳೊಡನೆ ಅವರು ಸಹಾನುಭೂತಿಪರರಾದರು ; ದಯಾಪರರಾದರು.

ಬದುಕಿಗೆ ಹೊಸ ಅರ್ಥವನ್ನು ಕಂಡುಕೊಂಡ ಅವರು "ಹೊತ್ತಾರೆ ಎದ್ದು ಕಣ್ಣ ಹೊಸೆಯುತ್ತಾ ಎನ್ನೊಡಲಿಂಗೆ, ಎನ್ನೊಡವೆಗೆ, ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದಡೆ ಎನ್ನ ಮನಕ್ಕೆ ಮನವೇ ಸಾಕ್ಷಿ" ಎಂದುಕೊಂಡರು ಇದಕ್ಕೆ ಕಾರಣ ತಂದಿಕ್ಕುವ ಶಿವಂಗೆ ಬಡತನವೇ' ಎಂಬ ನಂಬಿಕೆ. ಬಹುಕಾಲದಿಂದಲೂ ಜ್ಞಾನದಿಂದ, ಆಧ್ಯಾತ್ಮದಿಂದ, ಸಮಾಜದಲ್ಲಿ ಘನತೆ–ಗೌರವಗಳಿಂದ ವಂಚಿತರಾಗಿದ್ದ ದೀನ–ದಲಿತರನ್ನು ತಮ್ಮ ಮಟ್ಟಕ್ಕೇರಿಸಿದ ಶರಣರು ಅವರ ಕಣ್ಣೀರೊರಸಿ,

* ಹಿರಿಯ ವಿದ್ವಾಂಸರು, ಬೆಂಗಳೂರು



ಅವರೂ ಮಾನವರೆಂಬ ಅರಿವು ಮೂಡಿಸಿದರು. ಲೋಕದ ಡೊಂಕನ್ನು ತಿದ್ದಲು ಹೋಗುವುದು ಸುಲಭ. ಅದರ ಬದಲು ನಾವು ಒಬ್ಬೊಬ್ಬರೂ ನಮ್ಮ ನಮ್ಮ ದೌರ್ಬಲ್ಯಗಳನ್ನು ಹೋಗಲಾಡಿಸಿಕೊಂಡರೆ, ತಿದ್ದಿಕೊಂಡರೆ, ನಮ್ಮಂಥವರಿಂದ ಕೂಡಿದ ಸಮಾಜ, ದೇಶ ತಾನೇ ಪರಿಪೂರ್ಣವಾಗುತ್ತದೆ ಎಂಬ ತಿಳಿವಳಿಕೆಯನ್ನು ಉಂಟುಮಾಡಿದರು. ನಾವು ಒಳ್ಳೆಯವರಾಗಿದ್ದರೆ ಇನ್ನೊಬ್ಬರೂ ಒಳ್ಳೆಯವರಾದಾರು. ನಾವು ಕೆಟ್ಟವರಿದ್ದು ಇನ್ನೊಬ್ಬರು ಒಳ್ಳೆಯವರಾಗಿರಬೇಕೆಂಬ ನಿರೀಕ್ಷೆ, ಬೇವನ್ನು ಬಿತ್ತಿ ಮಾವನ್ನು ಬಯಸಿದಂತೆ ನಿಷ್ಫಲ !

ಬಾಳೆಗೊಂದು ಗೊನೆ, ಬಾಳಿಗೊಂದು ಮಾತು, ಎರಡಿಲ್ಲ ಎಂಬಂತೆ ನಡೆದವರು ಶರಣರು. ಅದಕ್ಕೆ ಒಳಗೊಂದು, ಹೊರಗೊಂದು; ನುಡಿಯೊಂದು, ನಡೆಯೊಂದು, ವಿಚಾರವೊಂದು, ಆಚಾರವೊಂದು ಆಗಬಾರದೆಂದರು ಅವರು. ಬಹಿರಾಡಂಬರಕ್ಕಿಂತ ಅಂತರಂಗ ಶುದ್ಧಿಯ ಕಡೆ ಹೆಚ್ಚು ಪ್ರಾಶಸ್ತ್ಯವಿತ್ತರು. ಬದುಕು ಉತ್ತಮವಾಗಲು, ಉದಾತ್ತವಾಗಲು ಶಾಂತಿ–ಸಮಾಧಾನ, ಸಹನಾಗುಣ ಅಷ್ಟೇ ಅತ್ಯಗತ್ಯ. ಇಲ್ಲದಿದ್ದರೆ "ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಂತಾಗುತ್ತದೆ" ಚಿತ್ತವ ಕದಡುವ ಕೋಪ–ತಾಪಗಳಿಗಿಂತ, ಚಿತ್ತಶುದ್ಧಿ, ಮನಸ್ಸಮಾಧಾನಗಳು ಎಷ್ಟು ಅಗತ್ಯವೆಂದರೆ "ಕೋಪಿ ಮಜ್ಜನಕ್ಕೆರೆದರೆ ರಕ್ತದ ಧಾರೆ, ಪಾಪಿ ಹೂವನೇರಿಸಲು ಮಸೆದಾಯುಧದ ಗಾಯ. ನೀತಿ ನಿಯಮಗಳ ನಿಯಂತ್ರಣವಿಲ್ಲದ ಬಾಳು ಬರಡು, ದೇಹ ಕೊರಡು". ಬದುಕಿಗೆ ಅರ್ಥಬರಲು ಅದರ ಬುನಾದಿಯಾಗಿ ನೀತಿ ಇರಬೇಕೆಂಬುದನ್ನು ಶರಣರು ಕಂಡುಕೊಂಡಿದ್ದರು.

## ಜ್ಞಾನಕ್ಕೆ ಪ್ರಾಶಸ್ತ್ಯ

ಅರಿವು ಮನುಷ್ಯನನ್ನು ಪಶುವಿನಿಂದ ಬೇರ್ಪಡಿಸಲು ಪ್ರಕೃತಿ ನೀಡಿದ ಒಂದು ದೊಡ್ಡ ಅನುಗ್ರಹ. ಅರಿವಿಲ್ಲದಿದ್ದರೆ ಬದುಕು ಅರ್ಥಹೀನ ; ಅಷ್ಟೇ ಅಲ್ಲ, ಅನರ್ಥ ಸಾಧನವೂ ಆಗಬಹುದು ! ತನ್ನ ತಾನರಿವುದಂತೂ ಬಹುದೊಡ್ಡ ಜ್ಞಾನ. ತನ್ನ ಬಾಳನ್ನು ಸರಳವಾದ ರೀತಿಯಲ್ಲಾದರೂ ಅರ್ಥಮಾಡಿಕೊಳ್ಳದೆ, ಯಾಂತ್ರಿಕವಾಗಿ ಬಾಳ ನೂಕುವವನು ಪಶುವಿಗಿಂತ ಉತ್ತಮನಾಗಲಾರ. ಒಂದು ಸಣ್ಣ ಆಚರಣೆಯೇ ಆಗಿರಲಿ, ಅದನ್ನು ಅರಿತು ಆಚರಿಸದಿದ್ದರೆ, ಆ ಆಚರಣೆಗೆ ಅರ್ಥವಿಲ್ಲ. ಫಲವೂ ಇಲ್ಲ. ಕಲ್ಲನಾಗರಕ್ಕೆ ಹಾಲೆರೆದು ದಿಟದ ನಾಗರವ ಕೊಲ್ಲಲೆಳಸುವ ಡಾಂಭಿಕತನಕ್ಕೆ ಏನೆನ್ನೋಣ ?

ಅರಿವಿಲಿತನದ ಇಂಥ ಸಂದರ್ಭಗಳಲ್ಲಿ ವೈಚಾರಿಕತೆ ನಿದ್ದೆ ಹೋಗುತ್ತದೆ. ಮೂಢನಂಬಿಕೆ, ಅಂಧಶ್ರದ್ಧೆಗಳು ಆಳುತ್ತವೆ. ಮನುಷ್ಯ ಪರಿಸ್ಥಿತಿಯ ಕೈಬೊಂಬೆಯಾಗಿ, ಕಾಲ ಪ್ರವಾಹಕ್ಕೆ ಸಿಕ್ಕ ಹುಲ್ಲುಕಡ್ಡಿಯಾಗುತ್ತಾನೆ. ಆದ್ದರಿಂದಲೇ, ಬದುಕಿನ ಅರ್ಥಪೂರ್ಣತೆಗೆ ಶ್ರಮಿಸಿದ ಶರಣರು ಜ್ಞಾನಕ್ಕೆ ಹೆಚ್ಚು ಬೆಲೆಕೊಟ್ಟರು. ಸುಜ್ಞಾನದ ಬೆಳಕಿನಲ್ಲಿ ಬಾಳನ್ನು ಪೃಥಕ್ಕರಿಸಿ ನೋಡುವುದನ್ನು ಕಲಿತರು, ತಾನು ಬಾಳಿನಲ್ಲಿ ಗಳಿಸಬಹುದಾದ ಎಲ್ಲ ಸಂಪತ್ತಿಗಿಂತ ಜ್ಞಾನ ದೊಡ್ಡದೆಂದು ಅವರು ಮನಗಂಡಿದ್ದರು. "ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿ ನಿನ್ನವಳಲ್ಲ. ಅವು ಜಗಕ್ಕಿಕ್ಕಿದ ವಿಧಿ. ನಿನ್ನೊಡವೆ ಎಂಬುದು ಜ್ಞಾನರತ್ನ. ಅಂತಪ್ಪ ದಿವ್ಯರತ್ನದ ಕೆಡಗುಡದೆ, ಆ ರತ್ನವ ನೀನಲಂಕರಿಸಿದೆಯಾದಡೆ..... ನಮ್ಮ ಗುಹೇಶ್ವರಲಿಂಗದಲ್ಲಿ ಸಿರಿವಂತರಾರೂ ಇಲ್ಲ ಕಾಣಾ ಎಲೆಮನವೇ" ಎಂದು ನಿವೇದಿಸಿಕೊಂಡರು.

## ದುಡಿಮೆಗೆ ಪ್ರಾಶಸ್ತ್ಯ

ಜೀವನ ನಿಂತ ನೀರಾಗಬಾರದು. ಬಾಳಿನಲ್ಲಿ ಕ್ರಿಯಾಶೀಲತೆ ಇರಬೇಕು. ಇಲ್ಲದಿದ್ದರೆ ಸೋಮಾರಿತನ, ಜಡತೆ ಎಂಬ ಕುಟ್ಟೆ ಸಮಾಜವನ್ನು ಶಿಥಿಲವಾಗಿಸುತ್ತದೆ, ಬದುಕು ಬರಡಾಗಿ, ಜೊಳ್ಳಾಗಿ ಪರಿಣಮಿಸುತ್ತದೆ. ದುಡಿಮೆ ತುಂಬು ಬಾಳಿನ ಇಂಬು ಎಂಬುದನ್ನು ಶರಣರು ಅರಿತರು. ಅವರು ದುಡಿಮೆಗೆ, ಶ್ರಮಜೀವನಕ್ಕೆ ಹೊಸ ಅರ್ಥಕೊಟ್ಟರು. ಸತ್ಯಶುದ್ಧವಾದ ದುಡಿಮೆಗೆ 'ಕಾಯಕ'ವೆಂದರು. ಅದರ ಮಹತ್ವವನ್ನು ಎತ್ತಿ ಹಿಡಿದು 'ಕಾಯಕವೆ ಕೈಲಾಸ'ವೆಂದರು. ತಾನು ನಿಷ್ಠೆಯಿಂದ, ನಿಷ್ಕಾಮ ಬುದ್ಧಿಯಿಂದ, ನಿರ್ಮಲ ಮನಸ್ಸಿನಿಂದ ಮಾಡುವ ಸೇವೆ ಭಗವಂತನ ಪೂಜೆಯೇ. ನಿಯತ ಕಾಲದಲ್ಲಿ ಮಿಂದು, ಮಡಿಯುಟ್ಟು ದೇವರ ಮನೆಯಲ್ಲಿರುವ ವಿಗ್ರಹದ ಮೇಲೆ ಹೂವೇರಿಸಿದಾಗ ಮಾತ್ರ ಪೂಜೆಯಲ್ಲ ; ಕಾಯಕದಲ್ಲಿ ನಿಷ್ಠೆಯುಳ್ಳವನ ಸತ್‌ಕ್ರಿಯೆಗಳೆಲ್ಲವೂ ಭಗವದಾರಾಧನೆಯೇ. ಅಷ್ಟೇ ಅಲ್ಲದೆ, ಮಾಡುವ ಉದ್ಯೋಗದಲ್ಲಿ ತರ–ತಮಗಳಿಲ್ಲ ; ಮೇಲು–ಕೀಳುಗಳಿಲ್ಲ. ಕೆರಗಳನ್ನು ಹೊಲೆಯುವ ಚಮ್ಮಾರನ ಕೆಲಸ ಕೀಳಲ್ಲ, ರಾಜನ ಬಳಿಯ ಉನ್ನತ ಹುದ್ದೆ ದೊಡ್ಡದಲ್ಲ. ಕೆಲಸ ಯಾವುದೇ ಇರಲಿ ಅದು ಸಮಾಜ ಜೀವನಕ್ಕೆ ಅಗತ್ಯ. ಆಗ ಇದ್ದ ಕಾಯಕದ ಕಲಿಗಳ ಪಟ್ಟಿಯನ್ನು ನೋಡಿದರೆ ಆಶ್ಚರ್ಯವಾದೀತು ! ಆಯ್ದಕ್ಕಿ ಮಾರಯ್ಯ, ಮಡಿವಾಳ ಮಾಚಯ್ಯ, ಹಡಪದ ಅಪ್ಪಣ್ಣ, ಹೆಂಡದ ಮಾರಯ್ಯ, ಗಾಣದ ಕನ್ನಪ್ಪ, ನುಲಿಯ

ಚಂದಯ್ಯ, ಮೇದರ ಕೇತಯ್ಯ, ಬಹುರೂಪಿ ಚೌಡಯ್ಯ, ರಾಯಸದ ಮಂಚಣ್ಣ, ವೈದ್ಯ ಸಂಗಣ್ಣ, ತಳವಾರ ಕಾಮಿದೇವ, ನಗೆಯ ಮಾರಿತಂದೆ, ಬಾಚಿ ಕಾಯಕದ ಬಸವಣ್ಣ, ಸೂಜಿ ಕಾಯಕದ ರಾಮಿತಂದೆ, ಕನ್ನಡಿ ಕಾಯಕದ ಅಮ್ಮಿದೇವಯ್ಯ, ಎಚ್ಚರಿಕೆ ಕಾಯಕದ ಮುಕ್ತನಾಥ, ಸತ್ತಿಗೆ ಕಾಯಕದ ಮಾರಿತಂದೆ, ಒಬ್ಬರೇ ಇಬ್ಬರೇ, ಒಂದು ಉದ್ಯೋಗವೆ ? ಎರಡೇ? ಸಮಾಜ ಜೀವನಕ್ಕೆ ಅಗತ್ಯವಾದ ಎಲ್ಲ ಕಸುಬಿನವರೂ ಕೂಡಿ ನಡೆಸಿದ ಬದುಕಿನ ಯಥಾರ್ಥತೆಯ ಪ್ರಯೋಗ !

ದಾಸೋಹಂಭಾವದಿಂದ ಆಸೆ-ಆಮಿಷಗಳಿಗೆ ಬಲಿಯಾಗದೆ ಮಾಡುವ ನಿಸ್ವಾರ್ಥವಾದ ಸೇವೆಯೇ ಶ್ರೇಷ್ಠ. ಆಗ ಮನುಷ್ಯನ ಬದುಕಿಗೆ, ಅವನ ಕ್ರಿಯಾತ್ಮಕ ಚಟುವಟಿಕೆಗಳಿಗೆ ಅರ್ಥಬರುತ್ತದೆ. ಸಾರ್ಥಕತೆ ಉಂಟಾಗುತ್ತದೆ. ಇದು ಶರಣರು ಬದುಕಿನ ಕ್ರಿಯಾಶೀಲತೆಯನ್ನು ಅರ್ಥೈಸಿದ ರೀತಿ. ಅವರು ದುಡಿಮೆಗೆ ಎಷ್ಟು ಪ್ರಾಶಸ್ತ್ಯಕೊಟ್ಟರೆಂದರೆ ದೇವನಾದರೂ ದುಡಿದೇ ತಿನ್ನಬೇಕು ; ಇಲ್ಲದಿದ್ದರೆ ಅನ್ಯಾಯವಾಗುತ್ತದೆ ಎಂದರು. ಉದ್ಯೋಗಕ್ಕೆ ಅದು ಸಣ್ಣದಿರಲಿ, ದೊಡ್ಡದಿರಲಿ ಅವರು ನೀಡಿದ ಪ್ರಾಶಸ್ತ್ಯದಿಂದ ಉಂಟಾದ ದೊಡ್ಡ ಉಪಕಾರವೆಂದರೆ, ಆಯಾ ಕಸಬುಗಳು ಪುಷ್ಟಿಗೊಂಡವು; ಆಯಾ ಕಲೆಗಳು ವಿಕಾಸವಾದವು. ತನ್ನ ಕಸುಬು ಕ್ಷುಲ್ಲಕವೆಂಬ ಕೀಳರಿಮೆಯಿಂದ ಕೈಬಿಟ್ಟವರು ಶರಣರ ಈ ಹೊಸ ತಿಳಿವಿನ ಬೆಳಕಿನಲ್ಲಿ ತಮ್ಮ ತಮ್ಮ ಕುಲಕಸುಬಿನ ಮಹತ್ವವನ್ನು ಕಂಡುಕೊಂಡು ಅದರ ಏಳ್ಗೆಗೆ ಶ್ರಮಿಸಹತ್ತಿದರು. ಇದು ಒಂದು ಸರ್ವಾಂಗಸುಂದರ ಸಮಾಜ ರಚನೆಗೆ, ಆ ಸಮಾಜದ ಸಮತೂಕದ ಆರ್ಥಿಕ ವ್ಯವಸ್ಥೆಗೆ ಕಾರಣವಾಯಿತು. ಬದುಕಿನ ಈ ಮುಖದಲ್ಲಿ ಶರಣರು ಕಂಡ ಹೊಸ ಅರ್ಥದೀಪ್ತಿ 'ಹಿಂದಿಲ್ಲ ಮುಂದಿಲ್ಲ' ಎಂಬಂತಿದೆ !

## ಸೌಹಾರ್ದ-ಸರಸ ಸಜ್ಜನಿಕೆ

'ತಾನುಂಟೋ ಮೂರುಲೋಕವುಂಟೋ' ಎಂದು ಬಾಳುವ ಸ್ವಾರ್ಥದ ಬದುಕಿಗೆ ಏನು ಅರ್ಥವಿದೆ, ಮಹತ್ವವಿದೆ? ತಾನು ತುಂಬು ಬಾಳನ್ನು ಬಾಳಿ, ಉಳಿದವರನ್ನೂ ಉತ್ತಮವಾಗಿ ಬಾಳಗೊಡುವುದರಿಂದ ಮಾತ್ರ ಮಾನವನ ಬದುಕಿಗೆ ಅರ್ಥ, ಮೌಲ್ಯ. ಮಾನವ ಕುಲ ಒಂದೇ ಎಂಬ ಭಾವ ಬಲಿದು ಸಮಾನತೆಯ ಸೂತ್ರದಿಂದ ಎಲ್ಲರನ್ನೂ ಒಟ್ಟುಗೂಡಿಸಬೇಕು. ಇದಕ್ಕೆ ಗಂಡು-ಹೆಣ್ಣು, ಬಡವ-ಬಲ್ಲಿದ, ಉಚ್ಚ-ನೀಚ ಮೊದಲಾದ ತಾರತಮ್ಯಗಳು ದೂರಾಗಬೇಕು. ಮಾನವನ ಅಲ್ಪತನ ದೂರಸರಿದು ವಿಶಾಲ ದೃಷ್ಟಿ ಮೂಡಿದರೆ ಸೌಹಾರ್ದ ಸಹಜವಾಗಿಯೇ ಬರುತ್ತದೆ ಎಂಬುದನ್ನು ಗುರುತಿಸಿದ ಶರಣರು ತಮ್ಮ ಸಹಜೀವಿಗಳ ಬಗ್ಗೆ ಅಪಾರ ಅನುಕಂಪೆಯನ್ನು ತಳೆದರು. ಸರಸ ಸಜ್ಜನಿಕೆಗಳಿಂದ ಅವರು ಎಲ್ಲರೊಳೊಂದಾದರು. 'ತನಗಿಂತ ಕಿರಿಯರಿಲ್ಲ' ಎಂಬ ಸೌಜನ್ಯಭಾವ ಉತ್ತಮವಾದ ಸೌಹಾರ್ದ ಬಾಳುವೆಗೆ ನಾಂದಿಯಾಯಿತು. ಹಂಚಿ ಉಣ್ಣುವ ಸಂಸ್ಕೃತಿ ಮೈಗೂಡಿತು ; 'ಯೋಗ್ಯರಾದವರಿಗೆ ಇತ್ತು ಶುದ್ಧರಾಗುವ ಬುದ್ಧಿಯೂ ಬಲಿಯಿತು'. 'ಕಾಗೆ ಒಂದಗುಳ ಕಂಡರೆ ಕರೆವುದು ತನ್ನ ಬಳಗವೆಲ್ಲವ'. ಮಾನವ ಹಾಗಿಲ್ಲದಿದ್ದರೆ ಕಾಗೆ, ಕೋಳಿಗಳಿಗಿಂತ ಕನಿಷ್ಠನಲ್ಲವೆ? ಅಂತೆಯೇ ಶರಣರು ಲೌಕಿಕ ಹಾಗೂ ಪಾರಮಾರ್ಥಿಕ ಎರಡು ವಿಚಾರದಲ್ಲೂ ಇತರರೊಡನೆ ಪರಸ್ಪರ ಸಹಕರಿಸಿ, ಬದುಕನ್ನು ಲೇಸು ಗೈವ ಮಣಿಹದಲ್ಲಿ ಉತ್ಸಾಹದಿಂದ ಪಾಲುದಾರರಾದರು. ಹೀಗೆ ಮಾನವಕುಲದ ಹಿತಚಿಂತಕರಾದ ಶರಣರು ಕೇವಲ ತನ್ನೊಬ್ಬನ ಏಳಿಗೆ, ತನ್ನೊಬ್ಬನ ಉದ್ಧಾರ ದೊಡ್ಡದಲ್ಲ, ಸಕಲ ಜೀವಾವಳಿಗೆ ಲೇಸನುಂಟು ಮಾಡುವ ಸೇವಾಮನೋಭಾವ ದೊಡ್ಡದೆಂದು ತೀರ್ಮಾನಿಸಿ ಬದುಕಿಗಿರುವ ವಿಶಾಲವಾದ ಅರ್ಥವನ್ನು ಸ್ಪುಟಗೊಳಿಸಿದ್ದಾರೆ. ಅವರು ಬಾಳಿನಲ್ಲಿ ತೋರಿಸಿದ ಸಮರ್ಪಣಭಾವ ಉಳಿದವರಿಗೆ ದಾರಿದೀಪ.

## ಇಹ-ಪರ ಸಾಧನೆ

ಶಿವಶರಣರು ಅಧ್ಯಯನಶೀಲರು. ಬಾಳಿನ ಪ್ರಯೋಗ ಶಾಲೆಯಲ್ಲಿ ಅವರು ಅನೇಕ ಪ್ರಯೋಗಗಳನ್ನು ನಡೆಸಿ ಮಾನವ ಜೀವನದ ಮೌಲ್ಯವನ್ನು ಕಂಡುಕೊಂಡ ಸತ್ಯಾನ್ವೇಷಕರು. ಈ ಸತ್ಯದ ಬೆಳಕಿನಲ್ಲಿ ಬದುಕಿನ ಹೊಸ ಹೊಸ ಆಯಾಮಗಳನ್ನು, ಧ್ಯಾಯಾರ್ಥಗಳನ್ನು ಅವರು ಗುರುತಿಸಿದ್ದಾರೆ. ಇಹದ ಬಾಳಲ್ಲಿ ಸುಖವಾಗಿರಬೇಕು. ಮತ್ತು ಇಲ್ಲಿ ಪುಣ್ಯಾರ್ಜನೆ ಮಾಡಿ ಪರಲೋಕದಲ್ಲೂ ಸುಖವಾಗಿರುವಂತೆ ನೋಡಿಕೊಳ್ಳಬೇಕು ಎಂದು ಲೌಕಿಕ ವ್ಯಕ್ತಿ ವಿಚಾರ ಮಾಡುತ್ತಾನೆ. ಆದರೆ ಸೌಲಭ್ಯಾಕಾಂಕ್ಷಿಯಾದ ಆತ, ಕಡಿಮೆ ಶ್ರಮದಿಂದ ಹೆಚ್ಚು ಫಲ ಪಡೆಯುವ ಚಪಲಕ್ಕೆ ಸಿಕ್ಕಿ, ಕಡಿಮೆ ಸತ್ಕಾರ್ಯ ಮಾಡಿ, ಮೋಕ್ಷ ಫಲವನ್ನು ಗಿಟ್ಟಿಸಲು ಆಶಿಸುತ್ತಾನೆ. ಈ ದಂದುಗದಲ್ಲಿ ಸಿಕ್ಕಿದ ಆತನಿಗೆ, ಇಹದ ಕರ್ತವ್ಯಕ್ಕಿಂತ ಪರದ ಚಿಂತೆಯೇ



ಅಧಿಕವಾಗಿ ಬಿಡುತ್ತದೆ. ಸದಾ ತನಗೆ ಮೋಕ್ಷ ಪದವಿಯನ್ನು ಕಾದಿರಿಸುವ ಬಗೆಗೇ ತವಕ ಹೆಚ್ಚಿಸಿ ಕೊಳ್ಳುತ್ತಾನೆ. ಇದರಿಂದ ದೊಡ್ಡ ಅನರ್ಥವುಂಟಾಗುತ್ತದೆ. ಇದು ಎರಡನ್ನೂ ಕಳೆದುಕೊಳ್ಳುವ ಎಡಬಿಡಂಗಿತನ. ಅದಕ್ಕೇ ಪ್ರಭು, ಸಾಯುವುದಕ್ಕೆ ಮುಂಚೆಯೇ ಹೆಣದಂತೆ ಬಾಳಬೇಡಿ ಎಂದಿದ್ದಾರೆ : 'ಸತ್ತು ಮುಂದೆ ದೇವರ ಕೂಡಿಹೆನೆಂಬಿರಿ, ಸಾಯದ ಮುನ್ನ ಸತ್ತಿದ್ದರೆ ಎಂತಯ್ಯ?' ಇದನ್ನರಿತ ಶರಣರು ಇಹದಲ್ಲಿದ್ದೇ ಪರವನ್ನು ಸಾಧಿಸುವ ಸುವರ್ಣ ಮಾಧ್ಯಮವನ್ನು ಬದುಕಿನಲ್ಲಿ ಕಂಡುಕೊಂಡರು. ಸ್ವರ್ಗ ನರಕಗಳು ಬೇರೆ ಎಂಬುದನ್ನಾಗಲೀ, ಈ ಲೋಕ-ಪರಲೋಕವೆಂಬ ಭಿನ್ನತೆಯನ್ನಾಗಲೀ ಅವರು ಒಪ್ಪಲಿಲ್ಲ. 'ಪುಣ್ಯ-ಪಾಪ ತಮ್ಮಿಷ್ಟ ಕಂಡಿರೇ' ಎಂದೂ, 'ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದರೆ ನರಕ ; ಆಚಾರವೇ ಸ್ವರ್ಗ, ಅನಾಚಾರವೇ ನರಕ ; ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ' ಎಂದೂ ಅವರು ತಿಳಿಯಾಗಿ ಹೇಳಿದರು. ಲೌಕಿಕ ಬಾಳೆಂದರೆ ಒಂದು ಸಾಧನರಂಗ. ಇಲ್ಲಿ ಇದ್ದು ಜೈಸಬೇಕು. ಅದೇ ಮೋಕ್ಷ. ಇದೊಂದು ಕರ್ಮಶಾಲೆ. ಇಲ್ಲಿ ನಾವು ಸತ್ಕ್ರಿಯಾಶೀಲರಾಗಿ ಬಾಳಬೇಕು. ಸತ್ಯ ಶುದ್ಧ, ನಿಸ್ವಾರ್ಥಕ್ರಿಯೆಯೇ ನಮಗೆ ಫಲ ನೀಡುವ ಕಾಮಧೇನು. ಈ ಲೋಕವೆಂಬ ಕರ್ತಾರನ ಟಂಕಶಾಲೆಯಲ್ಲಿ ನಮ್ಮ ವ್ಯಕ್ತಿತ್ವದ ನಾಣ್ಯ ಸಿದ್ಧವಾಗುತ್ತದೆ. ನಮ್ಮ ನಡೆ-ನುಡಿಗಳು ಶುದ್ಧವಾಗಿದ್ದರೆ ನಮ್ಮ ವ್ಯಕ್ತಿತ್ವದ ಮೇಲೆ ಚೊಕ್ಕ ಮುದ್ರೆ ಮೂಡುತ್ತದೆ. ನಾವು 'ನಡೆಯುವ ನಾಣ್ಯ' ವಾಗುತ್ತೇವೆ. ಇಲ್ಲಿಯಷ್ಟೇ ಅಲ್ಲ ; ಅಲ್ಲಿ ಮತ್ತು ಎಲ್ಲೆಲ್ಲೂ ಸಲ್ಲುವ ನಾಣ್ಯವಾಗುತ್ತೇವೆ. ಆಗ ನಮ್ಮ ವ್ಯಕ್ತಿತ್ವಕ್ಕೊಂದು ನೆಲೆ, ಬಾಳಿಗೊಂದು ಬೆಲೆ ಬರುತ್ತದೆ. ಇಲ್ಲದಿದ್ದರೆ ಬದುಕು ಖೊಟ್ಟಿ ನಾಣ್ಯವೆನಿಸುತ್ತದೆ.

ನಾವು ಮರ್ತ್ಯರು, ಮಹದತ್ತ ಸಾಗಬೇಕು ಎಂಬ ವಿಚಾರವನ್ನು ಕೈಬಿಟ್ಟು ಶರಣರು ಮರ್ತ್ಯಕ್ಕೇ ಮಹವತರುವ ಸಾಹಸದಲ್ಲಿ ತೊಡಗಿದರು. ಸಾಮರಸ್ಯದ ಜೀವನದಿಂದ ಬದುಕಿದರೆ ಉಂಟಾಗುವ ಕಲ್ಯಾಣದ ಅರ್ಥವನ್ನು ಅವರು ದರ್ಶಿಸಿದರು. ದೇವರೆಲ್ಲಿದ್ದಾನೆಂದು ಗುಡಿ ಗುಂಡಾರಗಳಲ್ಲಿ ಅರಸಬೇಕಿಲ್ಲ. ದೇಹವೇ ದೇಗುಲ, ಕಾಲೇ ಕಂಬ, ಶಿರವೇ ಹೊನ್ನ ಕಲಶ, ಹೃದಯವೇ ಪೀಠ. ಅಲ್ಲಿ ನೆಲೆಗೊಂಡಿದ್ದಾನೆ ದೇವರು. ಅಲ್ಲೇ ಅವನನ್ನು ಕಾಣಬಹುದಲ್ಲವೇ ? ಎಂದ ಅವರು ಜನರ ಕಲ್ಪನೆಯಲ್ಲಿದ್ದ ಕೈಗೆಟುಕದ ಪರಲೋಕ, ಸ್ವರ್ಗದ ವಿಚಾರವನ್ನು ಅಲ್ಲಗಳೆದರು. ಒಳಿತು-ಕೆಡಕು, ಹಾನಿ-ವೃದ್ಧಿ ನಮ್ಮ ಕೈಯಲ್ಲೇ ಇದೆ. ವಿಧಿಯನ್ನು ನೆಮ್ಮಿ ಕೈಕೊಟ್ಟ ಕುಳಿತುಕೊಳ್ಳಬೇಕಿಲ್ಲ. ನಮ್ಮ ಭವಿಷ್ಯವನ್ನು ನಾವೇ ನಿರ್ಧರಿಸಿಕೊಳ್ಳಬೇಕು. ಅಲ್ಲದೆ "ಊರ ಮುಂದೆ ಹಾಲಹಳ್ಳ ಹರಿಯುತ್ತಿರುವಾಗ ಓರೆಯಾವಿನ ಬೆನ್ನ ಹರಿಯಲೇಕೆ?' ಎಂದೂ, 'ಅಮೃತಸಾಗರದೊಳಗಿದ್ದು ಆಕಳಚಿಂತೆಯೇಕೆ' ಎಂದು ಪ್ರಶ್ನಿಸಿದರು.

## ಸಂಸಾರ-ಆಧ್ಯಾತ್ಮ

ಸಂಸಾರ ತ್ಯಾಜ್ಯವೂ ಅಲ್ಲ, ದೂಷ್ಯವೂ ಅಲ್ಲ. ಅದರಲ್ಲಿರುವ ಕೆಡುಕಿನ ಅಂಶವನ್ನು ಕಂಡುಕೊಂಡು ನಿವಾರಿಸಿದರೆ ಆಯಿತು. ಅದು ಬಿಟ್ಟು ಸಂಸಾರವೇ ಬೇಡ, ಲೌಕಿಕ ಜೀವನವೇ ಬೇಡವೆಂದರೆ ಹೇಗೆ ? ಅದು ಕೇವಲ ಪಲಾಯನ ತಂತ್ರವಾಯಿತು. 'ಕೊಟ್ಟ ಕುದುರೆಯ ನೇರಲೊಲ್ಲದೆ ಹಲ್ಲಣವ ಹೊತ್ತು ಬಳಲುವವರು ವೀರರೂ ಅಲ್ಲ, ಧೀರರೂ ಅಲ್ಲ' ದೇವರು ನಮಗೆ ಈ ಬಾಳನ್ನು ಅನುಗ್ರಹಿಸಿದ್ದಾನೆ. ಅದು ಪಾಲಿಗೆ ಬಂದ ಪಂಚಾಮೃತ. ಅದನ್ನು ಮತ್ತಷ್ಟು ಅಪ್ಯಾಯನವಾಗಿಸಿಕೊಳ್ಳಲು ಶ್ರಮಿಸಬೇಕು. 'ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲಡೆ ಹಾವಿನ ಸಂಗ ಲೇಸಯ್ಯ' ಎಂದ ಅಕ್ಕ ಸಂಸಾರದಲ್ಲಿದ್ದು ಲೇಸಾದ ಬದುಕು ಸಾಧ್ಯವೆಂಬುದನ್ನು ಮನಗಾಣಿಸಿದ್ದಾಳೆ. ಸಂಸಾರದಲ್ಲಿರುವ ಮಾರಕವಾದ ಅಂಶಗಳನ್ನು ನಿವಾರಿಸಿ, ತಾರಕವಾದ ಅಂಶಗಳನ್ನು ವೃದ್ಧಿಪಡಿಸಿಕೊಂಡು ಬದುಕನ್ನು ಬಂಗಾರವಾಗಿಸಿಕೊಂಡರು ಶರಣರು. "ಮನುಷ್ಯ ಬಾಳಿನಲ್ಲಿರುವ ರಸಸ್ಥಾನಗಳನ್ನು ಅರಿಯುವ ಅನುಭವಿಸುವ ರಸಿಕನಾಗಬೇಕು. ಕಬ್ಬಿನ ತೋಟಕ್ಕೆ ನುಗ್ಗಿ ಕಬ್ಬಿನ ಗರಿಗಳನ್ನು ಮೇದು ಅಲ್ಪ ಸುಖಕ್ಕೆ ಸೋಲುವ ಕುರಿಯಂತಾಗಬಾರದು. ರಸಸ್ಥಾನವನ್ನರಿತು ರಸವನ್ನು ಸವಿಯುವ ಆನೆಯಂತಾಗಬೇಕು" ಎಂಬುದು ಅವರ ಆಶಯ.

## ಬದುಕಿನ ಸವಾಲು

ಬದುಕು, ಅನೇಕ ಕಷ್ಟಕಾರ್ಪಣ್ಯಗಳನ್ನೊಡ್ಡಿ ಜೀವಿಗೆ ಸವಾಲು ಹಾಕುತ್ತದೆ. ಆಗ ಮನುಷ್ಯನು ಅವನ್ನು ಎದುರಿಸಲು ದಿಟ್ಟತನ ತೋರಬೇಕಾಗುತ್ತದೆ. ಕಷ್ಟಗಳು ಬಂದಾಗ ಅವು ಆತ್ಮವಿಕಾಸಕ್ಕೆ ಸಾಧನವೆಂಬ, ಆ ಅಗ್ನಿ ಪರೀಕ್ಷೆಯಲ್ಲಿ ತನ್ನ ಮನದ ಕಾಳಿಕೆ ಕಳೆವುದೆಂಬ ಅರಿವು ಮೂಡಬೇಕು. 'ಶ್ರೀಗಂಧ'ವನ್ನು ಅರೆದೊಡೆ

ನೊಂದೆನೆಂದು ಸುವಾಸನೆ ಬಿಡುವುದಿಲ್ಲ ಸಂದುಸಂದನು ಕಡಿದು ಕಬ್ಬನ್ನು ಗಾಣದಲಿಕ್ಕಿ ಅರೆದೊಡೆ, ಬೆಂದು ಪಾಕಗೊಂಡು ಸಕ್ಕರೆಯಾದೆನೆಂದು ಸವಿಯ ಬಿಡುವುದಿಲ್ಲ. ಹಾಗೆ ಮನುಷ್ಯ ಬಾಳಿನಲ್ಲಿ ಇಂಥ ಪರೀಕ್ಷೆಗಳನ್ನು ಸ್ವಾಗತಿಸಬೇಕು. ಬೆದರದೆ ಬೆಚ್ಚದೆ, ಸತ್ಯದ ಹಾದಿಯ ಬಿಡದಿರಬೇಕು. 'ಎಲುದೋರಿದರೆ, ನರ ಹರಿದರೆ, ಕರುಳು ಕುಪ್ಪಳಿಸಿದರೆ ನಾ ಧೃತಿಗೆಡೆನಯ್ಯಾ' ಎಂಬ ದಿಟ್ಟ ನಿಲವು ಬೇಕು. ಇದನ್ನು ಸಾಧಿಸುವುದು ಹೇಗೆ ? ನಿರಂತರ ಪರಿಶ್ರಮದಿಂದ. ಜೀವನ ನಿಂತ ನೀರಾಗಬಾರದು. ಸದಾ ಪ್ರವಹಿಸುವ, ಹೊಸ ದಿಸೆಯಲ್ಲಿ, ಹೊಸತನವನ್ನು ಮೈಗೂಡಿಸಿಕೊಂಡು ಚಿರ ನೂತನವಾಗಿ ಸಾಗುವ ನದಿಯಾಗಬೇಕು. ಇದನ್ನು ಒಮ್ಮೆಲೇ ಸಾಧಿಸಲಾಗುವುದಿಲ್ಲ. ಆತುರಪಟ್ಟರೆ ಸಿಕ್ಕುವುದು ಅಪಕ್ವಫಲ ಅಥವಾ ಒತ್ತಿ ಹಣ್ಣು ಮಾಡಿದ ಕೆಟ್ಟ ಹಣ್ಣು. ಅದಕ್ಕೆ ಮಹಾನುಭಾವಿಗಳಾದ ಶರಣರು ಹೇಳುವುದು ಹೀಗೆ : ಜೀವನದಲ್ಲಿ ಪ್ರಗತಿ ಸಾವಕಾಶವಾಗಿ, ಆದರೆ ಸ್ಥಿರವಾಗಿ ಆಗಬೇಕು-ಮೊಗ್ಗು ಅರಳಿ ಹೂವಾದಂತೆ, ಆದರೆ ಮನುಷ್ಯ 'ದಿಢೀರ್ ಫಲ'ವನ್ನು ಬಯಸುವವ-ಬೆಳಕು ಹರಿಯುವುದರಲ್ಲಿ ಸಿರಿವಂತನಾಗಬೇಕು. ವರ್ಷ ಕಳೆವುದರೊಳಗೆ ಉನ್ನತ ಗದ್ದುಗೆಗೇರಬೇಕು, ಇತ್ಯಾದಿ. ಆದರೆ ಅಣ್ಣನ ನಿಲವು ಹೀಗಿದೆ : 'ಭಕ್ತನೆನಿಸಯ್ಯ ಮೆಲ್ಲಮೆಲ್ಲನೆ. ಯುಕ್ತನಿನೆಸಯ್ಯ ಮೆಲ್ಲಮೆಲ್ಲನೆ...... ಎಡಹುಗುಳಿಗಳ ದಾಂಟಿ ಬರಬರ ಲಿಂಗೈಕ್ಯನೆನಿಸಯ್ಯ ಕೂಡಲ ಸಂಗಮದೇವಾ, ನಿಮ್ಮಿಂದಧಿಕನೆನಿಸಯ್ಯಾ'. ಸಹಜವಾಗಿ, ದೃಢವಾಗಿ ಸಾಗುವ ಈ ವಿಕಾಸ ದೇವರಿಗೂ ಅಧಿಕವಾಗುವ ಸಾಮರ್ಥ್ಯವನ್ನು ತಂದುಕೊಡಬಲ್ಲದು ಎಂಬ ಭರವಸೆ ಅವರದು.

ಬದುಕು ಅರ್ಥಪೂರ್ಣವಾಗಲು ಬಾಳು ತುಂಬಿ ಬರಲು ಸಿರಿಸಂಪತ್ತು ಮುಖ್ಯವಲ್ಲ ; ಹುದ್ದೆ ಅಧಿಕಾರ ಮುಖ್ಯವಲ್ಲ. ಆಧ್ಯಾತ್ಮ ಸಾಧನೆಗೆ ಸಂಸಾರಿ ಅಥವಾ ಸಂನ್ಯಾಸಿ ಎಂಬ ವ್ಯತ್ಯಾಸ ಗೌಣ. ಅವನ ನಡೆ ನುಡಿ, ಜ್ಞಾನ ಕ್ರಿಯೆ ವಿಚಾರ-ಆಚಾರ, ಸತ್ಸಂಕಲ್ಪ-ಸದಾಚಾರ ಮುಖ್ಯ. ಅವುಗಳಲ್ಲಿ ಪರಸ್ಪರ ಸಾಮರಸ್ಯ ಮುಖ್ಯ. ಇವೇ ಮಾನವೀಯ ಮೌಲ್ಯಗಳು ಶರಣರು ಕಂಡ ಬಾಳಿನ ನಿಜವಾದ ಅರ್ಥ ಇದು. ಉಳಿದವೆಲ್ಲಾ ಇದಕ್ಕೆ ಪೂರಕ ಪೋಷಕ.

## ಅಭಿನಂದನೆ

ಶ್ರೀ ಮಠದ ವಿದ್ಯಾರ್ಥಿಯಾಗಿ, ಉತ್ತಮ ಶಿಕ್ಷಕರಾಗಿ, ದಕ್ಷ ಆಡಳಿತಗಾರರಾಗಿ, ಶ್ರೇಷ್ಠ ಕಲಾವಿದರಾಗಿ, ಆದರ್ಶ ಪುತ್ರರಾಗಿ, ಮಾದರಿ ಪತಿಯಾಗಿ, ಅಭಿಮಾನಧನರಾಗಿ, ಶ್ರೀಮಠದ ಎಲ್ಲಾ ಸೇವಾ ಕಾರ್ಯಕ್ರಮಗಳಲ್ಲಿ ಭಾಗಿಯಾಗಿ, ಬಸವೇಶ್ವರ ನಾಟಕದಲ್ಲಿ ಸ್ತ್ರೀ ಪಾತ್ರಧಾರಿಯಾಗಿ, ಸಿದ್ಧಲಿಂಗೇಶ್ವರ ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದ ವ್ಯವಸ್ಥಾಪಕರಲ್ಲೊಬ್ಬರಾಗಿ, ಸೇವೆ ಸಲ್ಲಿಸಿ ನಿವೃತ್ತರಾದ ಶ್ರೀ ಕೆ.ಎಸ್. ಉಮಾಮಹೇಶ್ ಅವರ ೬೦ ವರ್ಷದ ಅಭಿನಂದನಾ ಸಮಾರಂಭ ೧೬-೬-೨೦೧೯ರ ಭಾನುವಾರ ತುಮಕೂರಿನ ಸದಾಶಿವನಗರದ ಅಂಬಾವಿಲಾಸ ಕಲ್ಯಾಣ ಮಂಟಪದಲ್ಲಿ, ಪರಮಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಅಧ್ಯಕ್ಷರು, ಶ್ರೀ ಸಿದ್ಧಗಂಗಾ ಮಠ ಅವರ ದಿವ್ಯ ಸಾನ್ನಿಧ್ಯದಲ್ಲಿ, ಶ್ರೀ ಕೆ.ಬಿ.ಜಯಣ್ಣನವರ ಅಧ್ಯಕ್ಷತೆಯಲ್ಲಿ ಆಯೋಜಿತವಾಗಿತ್ತು. ಭಾಗವಹಿಸಿದ್ದ ಎಲ್ಲ ಗಣ್ಯಮಾನ್ಯರೂ, ವಿಧಾನ ಸಭೆ, ವಿಧಾನ ಪರಿಷತ್ ಸದಸ್ಯರಾದ ಶ್ರೀ ನಾರಾಯಣಸ್ವಾಮಿ, ಶ್ರೀ ನರಹರಿ, ಶ್ರೀ ಕೋ.ರಂ. ಬಸವರಾಜು, ಶ್ರೀ ಮರಿಬಸಪ್ಪನವರ ಸಮರ್ಥ ಸಹಕಾರದಲ್ಲಿ, ಡಾ॥ ಡಿ.ಎನ್.ಯೋಗೀಶ್, ಡಾ॥ ನಂಜುಂಡಸ್ವಾಮಿ ಮುಂತಾದವರ ಸಹಭಾಗಿತ್ವದಲ್ಲಿ, ಶ್ರೀ ಕವಿತಾಕೃಷ್ಣರ ಸವಿ ಸಿಹಿ ಮಾತುಗಳಿಂದ, ಶ್ರೀ ಮಠದ ಅನೇಕ ಆಪ್ತರಿಂದ ತುಂಬಿ ಬಂದಿತು.

ಸಮಾರಂಭದಲ್ಲಿ 'ಸ್ನೇಹಾನುಭಾವಿ' ಗ್ರಂಥ ಶ್ರೀ ಉಮಾಮಹೇಶರನ್ನು ಕುರಿತು ಡಾ॥ ಎಸ್.ಸಿ. ಪದ್ಮಪ್ರಸಾದರ ಗೌರವ ಸಂಪಾದಕತ್ವ ಪ್ರಧಾನ ಸಂಪಾದಕರಾದ ಶ್ರೀ ಮರಿಬಸಪ್ಪ, ಸಂಪಾದಕರಾದ ಡಾ॥ ಬಿ.ನಂಜುಂಡಸ್ವಾಮಿ ಅವರ ಸಂಪಾದಕತ್ವದಲ್ಲಿ ಅಭಿನಂದನಾ ಗ್ರಂಥ ಬಿಡುಗಡೆಯಾಯಿತು. ಬೆನ್ನುಡಿಯಲ್ಲಿ ಕೋ.ರಂ. ಬಸವರಾಜು, ನಿವೃತ್ತ ಪ್ರಾಧ್ಯಾಪಕರು ಬಸವಣ್ಣನವರ ವಚನ 'ಬೆಟ್ಟಕ್ಕೆ ಬಿದಿರೆ ನೀ ಅಟ್ಟಕ್ಕೇರುವಾಗ' ಎಂಬ ವಚನವನ್ನು ಉದ್ಧರಿಸಿ, ಶ್ರೀ ಉಮಾಮಹೇಶರದು ಕ್ರಿಯಾತ್ಮಕವಾದ ವ್ಯಕ್ತಿತ್ವ, ಸಿದ್ಧಗಂಗೆಯ ನಡೆದಾಡುವ ಕೂಡಲಸಂಗಮದೇವರ ಪೂಜಿಸಿದ ಅಂದರೆ ಸೇವೆ ಮಾಡಿದ ಫಲ ಉಮಾಮಹೇಶನ ಕೈಯ ಮೇಲಿದೆ. ತತ್ಕಾರಣದಿಂದಲೇ ಅವನಿಗೆ ಶ್ರೇಯಸ್ಸು, ಪ್ರೇಮಸ್ಸುಗಳೆರಡೂ ಒಟ್ಟಿಗೆ ಲಭ್ಯವಾಗಿವೆ"-ಎಂದು ಪ್ರಶಂಸಿದ್ದಾರೆ.

ಶ್ರೀ ಕೆ.ಎಸ್.ಉಮಾಮಹೇಶ್ ಅವರಿಗೆ ಶ್ರೀ ಸಿದ್ಧಗಂಗಾ ಗುರುಪರಂಪರೆ ಸಕಲಸನ್ಮಂಗಳವನ್ನು ಅನುಗ್ರಹಿಸಲಿ ಎಂದು ಸಿದ್ಧಗಂಗಾ ಹಾರೈಸುತ್ತದೆ.



ಪ್ರಸ್ತುತ

# ಜನಪದರು ಕಂಡಂತೆ ಶಿವಶರಣ ಕುಂಬಾರ ಗುಂಡಯ್ಯ

– ಎಚ್.ಎಸ್. ಸಿದ್ಧಗಂಗಪ್ಪ *

ಬಸವಣ್ಣನವರ ಸಮಕಾಲೀನನಾದ ಕುಂಬಾರ ಗುಂಡಯ್ಯ, ಬಸವಣ್ಣನವರ ಕಾಯಕ-ದಾಸೋಹ ಸಿದ್ಧಾಂತವನ್ನು ಜೀವನದಲ್ಲಿ ಅರ್ಥಪೂರ್ಣವಾಗಿ ಅಳವಡಿಸಿಕೊಂಡು, ಕಾಯಕದಲ್ಲಿ ಶಿವನನ್ನು ಕಂಡ ಮಹಾಶರಣ. ಕಾಯಕಕ್ಕೆ ಒಂದು ಮೌಲ್ಯವನ್ನು ತಂದುಕೊಡುವುದರ ಮೂಲಕ ಲೋಕಮಾನ್ಯನಾದ ಶಿವಶರಣ. ಶಾಸನ ಶಿಲ್ಪಗಳಲ್ಲಿ ಕುಂಬಾರ ಗುಂಡಯ್ಯನ ವ್ಯಕ್ತಿತ್ವ ಅನಾವರಣಗೊಂಡಿದೆ. ಮರಡೀಪುರದ ಶಾಸನದಲ್ಲಿ, ಅಬ್ಬಲೂರು ಸೋಮೇಶ್ವರ ದೇವಾಲಯದ ಪಾಳಿಯ ಮೇಲಿರುವ ಶಾಸನದಲ್ಲಿ ಗುಂಡಯ್ಯನ ಹೆಸರು ಪ್ರಸ್ತಾಪವಾಗಿದೆ. ಶರಣರ ವಚನಗಳಲ್ಲಿಯೂ ಗುಂಡಯ್ಯನ ಕಾಯಕ ಶ್ರದ್ಧೆ, ನಿಷ್ಠೆಯನ್ನು ವ್ಯಕ್ತಪಡಿಸಲಾಗಿದೆ. ಕಾಯಕ ಯೋಗಿ ಸಿದ್ಧರಾಮ ತನ್ನ ವಚನವೊಂದರಲ್ಲಿ –

**ಕುಂಬಾರರೆಲ್ಲರು ಗುಂಡಯ್ಯನಾಗಬಲ್ಲರೆ**
**ಮಡಿವಾಳರೆಲ್ಲರೂ ಮಾಚಯ್ಯನಾಗಬಲ್ಲರೆ**
**ಜೇಡರೆಲ್ಲರು ದಾಸಿಮಯ್ಯನಾಗಬಲ್ಲರೆ**
**ಎನ್ನಗುರು ಕಪಿಲ ಸಿದ್ಧಮಲ್ಲಿಕಾರ್ಜುನಯ್ಯ.**

ಎಂದು ತನ್ನ ಭಾವನೆಯನ್ನು ವ್ಯಕ್ತಪಡಿಸಿದರೆ, ಜೇಡರ ದಾಸಿಮಯ್ಯ ತನ್ನ ವಚನವೊಂದರಲ್ಲಿ –

**ನಂಬಿದ ಚೆನ್ನನಂಬಲಿಯುಂಡ !**
**ಕೆಂಭಾವಿಯ ಭೋಗಣ್ಣನ ಹಿಂದಾಡಿ ಹೋದ**
**ಕುಂಬಾರ ಗುಂಡಯ್ಯನ ಕುಂಭ ಗತಿಗೆ**
**ಕುಕಿಲೆಂದು ಕುಣಿದ; ನಂಬದೆ ಕರೆವವರ**
**ಹಂಬಲನೊಲ್ಲ ನಮ್ಮ ರಾಮನಾಥ.**



ಈ ಮೇಲಿನ ಎರಡು ವಚನಗಳಲ್ಲಿ ಕುಂಬಾರ ಗುಂಡಯ್ಯನ ಕಾಯಕ ಶ್ರದ್ಧೆ, ಶಿವಭಕ್ತಿ, ಗುಂಡಯ್ಯನ ಮಡಿಕೆ ವಾದನಕ್ಕೆ ಶಿವನು ಮೈಮರೆತು ಕುಣಿದ ವಿಷಯ ಪ್ರಸ್ತಾಪವಾಗಿದೆ.

ಕಾವ್ಯ, ಶಾಸ್ತ್ರ, ಪುರಾಣಗಳಲ್ಲಿ ಕುಂಬಾರ ಗುಂಡಯ್ಯನ ಜೀವನಗಾಥೆ ದಾಖಲಾಗಿದೆ. ವಿರೂಪಾಕ್ಷ ಪಂಡಿತನು ತನ್ನ 'ಚೆನ್ನಬಸವ ಪುರಾಣ'ದಲ್ಲಿ ಹೀಗೆ ಹೇಳಿದ್ದಾನೆ.

**ಶಿವ ಕುಣಿಯಲಾರದೊಡ ಬಹುರೂಪಣೆಯರುಂ**
**ಜವದಿಂದ ಕುರುಗಾಯ್ಸಿ ಬಹುರೂಪ ಚೌಡನುಂ**
**ಶಿವನ ಮುಂದಾಡಿ ಕುಂಬಾರ ಗುಂಡಯ್ಯನಂ**
**ಗತಿಗತಿಗೆ ಶಿವನ ಕುಣಿಸಿ....**

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ಲನೇ ಬ್ಲಾಕ್, ಸ್ಫೂರ್ತಿಧಾಮದ ಎದುರು ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫೫ ೬೫೮೭೧

ಮುಪ್ಪಿನ ಷಡಕ್ಷರಿಗಳು ತಮ್ಮ 'ಸುಬೋಧಸಾರ'ದಲ್ಲಿ ಶಾಂತಕವಿಯ 'ಅನುಭವ ಸ್ತೋತ್ರದ ಕಂದ'ದಲ್ಲಿ ಪ್ರಸ್ತಾಪ ಮಾಡಿದ್ದಾರೆ. ಮಹಾಕವಿ ಹರಿಹರ ಕುಂಬಾರ ಗುಂಡಯ್ಯನ ರಗಳೆಯನ್ನು ಬರೆದಿದ್ದು, ಅದೊಂದು ಅದ್ಭುತ ಕಾವ್ಯವಾಗಿರುವಂತೆ ಗುಂಡಯ್ಯನ ಬದುಕಿನ ಒಂದು ಅಪೂರ್ವ ಚರಿತ್ರೆಯೂ ಆಗಿದೆ. ಆದರೆ ನಾವು ಇಲ್ಲಿ ಗಮನಿಸಬೇಕಾದ ಒಂದು ಮುಖ್ಯವಾದ ಅಂಶವೆಂದರೆ ಶಾಸನ, ಕಾವ್ಯಪುರಾಣ, ಜನಪದ ಸಾಹಿತ್ಯದಲ್ಲಿ ಕುಂಬಾರ ಗುಂಡಯ್ಯನ ಕುರಿತು ಪ್ರಸ್ತಾಪವಿದ್ದರೂ, ಎಲ್ಲಾ ಕಡೆ ಆತ ಶಿವನನ್ನು ಕುಣಿಸಿದ ಒಂದೇ ಒಂದು ಘಟನೆ ಮಾತ್ರ ಪ್ರಸ್ತಾಪವಾಗಿದೆ. ಗುಂಡಯ್ಯನ ಅಥವಾ ಅವನ ಪತ್ನಿ ಕೇತಲದೇವಿಯ ಬದುಕನ್ನು ಕುರಿತು ಬೇರೆ ಯಾವುದೇ ದಾಖಲೆ ದೊರೆಯುವುದಿಲ್ಲ. ಇವೆಲ್ಲವೂ ಗೌಣವಾಗಿದ್ದರೂ, ಶಿವನನ್ನು ಕುಣಿಸಿದ ಘಟನೆ ಗುಂಡಯ್ಯನ ವ್ಯಕ್ತಿತ್ವಕ್ಕೆ ಕಳಸವಿಟ್ಟಂತೆ ಅವನ ಹೆಸರನ್ನು ಅಮರವಾಗಿಸಿದೆ. ಹರಿಹರ ತನ್ನ ರಗಳೆಯಲ್ಲಿ ಕುಂಬಾರ ಗುಂಡಯ್ಯನ 'ಕಾಯಕ ಮಹಿಮೆ'ಯನ್ನು ಭಕ್ತಪರಾಧೀನನಾದ ಶಿವನಲೀಲೆಯನ್ನು ವಿಶಿಷ್ಟ ರೀತಿಯಲ್ಲಿ ಚಿತ್ರಿಸಿದ್ದಾನೆ.

ಕುಂಬಾರ ಗುಂಡಯ್ಯನ ಜನ್ಮಸ್ಥಳ ಬೀದರ ಜಿಲ್ಲೆಯ ಭಾಲ್ಕಿ. ಅವನ ಪತ್ನಿ ಶರಣೆ ಕೇತಲದೇವಿ. ಅವರದು ಆದರ್ಶ, ಅನೂನ್ಯ ದಾಂಪತ್ಯಜೀವನ. ಈ ಶರಣ ದಂಪತಿಗಳು ಸಂಸ್ಮರಣೆಯ ಸಂಕೇತವಾಗಿ ಭಾಲ್ಕಿಯಲ್ಲಿ 'ಕುಂಬೇಶ್ವರ' ದೇವಾಲಯವಿದ್ದು ದೇವಾಲಯದ ಆವರಣದಲ್ಲಿ ಚತುರ್ಬಾಹು ಬ್ರಹ್ಮನ ಸುಂದರ ವಿಗ್ರಹವಿದೆ. ಗುಂಡಯ್ಯನ ಪತ್ನಿ ತನ್ನ ವಚನಕ್ಕೆ 'ಕುಂಭೇಶ್ವರ' ಎಂಬ ಅಂಕಿತವನ್ನು ಬಳಸಿದುದುದರಿಂದ ಅವರ ಆರಾಧ್ಯದೈವ ಕುಂಭೇಶ್ವರನಾಗಿದ್ದ ಎಂದು ಹೇಳಬಹುದು.

ಕುಂಬಾರಿಕೆ ಕಾಯಕದಿಂದಲೇ ತನ್ನ ಬದುಕನ್ನು ಕಟ್ಟಿಕೊಂಡು ಬಸವಾದಿ ಶರಣರ ಹಾಗೂ ಶಿವನೊಲುಮೆಗೆ ಪಾತ್ರನಾಗಿದ್ದ ಕುಂಬಾರ ಗುಂಡಯ್ಯ ತಾನು ಮಾಡುವ ಕಾಯಕದಿಂದಲೇ ಜನರು ಗುರುತಿಸುವಂತೆ ಮಾಡಿದ ಕಾಯಕ ಯೋಗಿ. ಕಾಯಕದಿಂದಲೇ ಆಧ್ಯಾತ್ಮಿಕ ಮೆಟ್ಟಿಲುಗಳನ್ನು ಹಂತ ಹಂತವಾಗಿ ಏರಿ ಶಿವನಲ್ಲಿ ಲೀನವಾದ ಶರಣ.

ಬಸವಾದಿ ಶರಣರ ಪ್ರಭಾವ ಉತ್ತರ ಕರ್ನಾಟಕದ ಭಾಗದಲ್ಲಿ ಕಂಡು ಬಂದಿರುವುದು ಸುಗ್ಗಿಕಾಲದಲ್ಲಿ ನಡೆಯುವ ಕೃಷಿ ಸಂಬಂಧಿತ ಕಾರ್ಯಗಳಲ್ಲಿ ತಮ್ಮ ಆಸರಿಕೆ ಬೇಸರಿಕೆಯನ್ನು ಪರಿಹರಿಸಿಕೊಳ್ಳಲು ಶರಣರನ್ನು ಕುರಿತು ಕಟ್ಟಿದ ತ್ರಿಪದಿಗಳನ್ನು ಹಾಡುವುದರ ಮೂಲಕ ಅವರನ್ನು ನೆನೆದು ಧನ್ಯತೆಯನ್ನು ಪಡೆಯುವುದನ್ನು ಕಾಣಬಹುದಾಗಿದೆ. ಡಾ. ಬಿ.ಎಸ್. ಗದ್ದಗಿಮಠ ಅವರು ಸಂಪಾದಿಸಿದ **ಕನ್ನಡ ಜಾನಪದ ಗೀತೆಗಳ** ಸಂಗ್ರಹದಲ್ಲಿ ಕುಂಬಾರ ಗುಂಡಯ್ಯನನ್ನು ಕುರಿತು ಅರವತ್ತು ತ್ರಿಪದಿಗಳಲ್ಲಿ ಅವನ ಬದುಕನ್ನು ಕಟ್ಟಿಕೊಡಲಾಗಿದೆ.

**ಮದುವೆ ಮಾಡುವ ಮುಂದೆ ಮುದದಿ ಐರಣಿ ಹೊತ್ತು**
**ಚದುರೆಯರು ತಂದು ಹಾಡುವರು । ಗುಂಡಯ್ಯ**
**ಸದರು ಶಿವಪದವ ಹೊಂದುವಿಕೆ.**

ಉತ್ತರ ಕರ್ನಾಟಕದ ಭಾಗದಲ್ಲಿ ಇಂದಿಗೂ ವೀರಶೈವ-ಲಿಂಗಾಯಿತರಲ್ಲಿ ಕುಂಬಾರ ಗುಂಡಯ್ಯ ಗೌರವಾನ್ವಿತ ಸ್ಥಾನವನ್ನು ಪಡೆದುಕೊಂಡಿದ್ದಾನೆ. ಇಲ್ಲಿ ವಿವಾಹ ಸಂದರ್ಭದಲ್ಲಿ ಉಪಯೋಗಿಸುವ ಮಣ್ಣಿನ 'ಐರಣಿ' (ಕಲಶ) ತರುವ ಸಂದರ್ಭದಲ್ಲಿ ಒಬ್ಬ ವ್ಯಕ್ತಿಯನ್ನು ಕೂರಿಸಿ, ಅವನಿಗೆ ಕುಂಬಾರ ಗುಂಡಯ್ಯನೆಂದು ನಾಮಕರಣ ಮಾಡಿ, ಅವನ ಹತ್ತಿರ 'ಐರಣಿ' ಇಟ್ಟು ಮಂಗಳವಾದ್ಯಗಳನ್ನು ನುಡಿಸುತ್ತಾ, ಅವನಿಂದ ಆಶೀರ್ವಾದ ಪಡೆದು 'ಕಲಶ' ತಂದು ಮದುವೆ ಕಾರ್ಯದಲ್ಲಿ ಬಳಸುವ ಪದ್ಧತಿ ಇದೆ. ಕೆಲವು ಸಂದರ್ಭಗಳಲ್ಲಿ ಕುಂಬಾರ ಜನಾಂಗದ ಒಬ್ಬ ವ್ಯಕ್ತಿಯನ್ನು ಮುಂಚಿತವಾಗಿಯೇ ಗೊತ್ತುಪಡಿಸಿ ಅವರಿಗೆ ಕುಂಬಾರ ಗುಂಡಯ್ಯನೆಂದು ಹೆಸರಿಸಿ ಕಲಶ ತರುವ ಪದ್ಧತಿಯೂ ಇದೆ.

**ಬೆಚ್ಚು ಹಾಕಿದ ಗಡಿಗಿ ಮುಚ್ಚಿಟ್ಟ ಹೊಲ ಹುಲಸು**
**ಬಚ್ಚಾದ ಬೆಳೆಯ ಕಣವುಕ್ಕಿ । ಗುಂಡಯ್ಯ**
**ಹೆಚ್ಚಾಯ್ತು ನಿನ್ನ ಶಿವಭಕ್ತಿ.**

ರೈತರು ತಾವು ಬೆಳೆದ ಬೆಳೆಯನ್ನು ಪಕ್ಷಿಗಳಿಂದ ರಕ್ಷಿಸಿಕೊಳ್ಳಲು 'ಬೆದರು' ಎಂದು ಒಂದು ಕೋಲಿಗೆ ಗಡಿಗೆಯನ್ನು ನೇತುಹಾಕಿ ಅದರ ಮೇಲೆ ಸುಣ್ಣದಿಂದ ಮನುಷ್ಯ ಮುಖದ ಆಕಾರ ಬಿಡಿಸಿರುತ್ತಾರೆ. ಇದನ್ನು ನೋಡಿ ಪ್ರಾಣಿ ಪಕ್ಷಿಗಳು ಹೊಲದ ಕಾವಲಿಗೆ ಮನುಷ್ಯ ಇರುವನೆಂದು ಭಾವಿಸಿ ಹೊಲದ ಹತ್ತಿರ ಸುಳಿಯುವುದಿಲ್ಲ. ಜನಪದರ ದೃಷ್ಟಿಯಲ್ಲಿ ಅದು ಬರೀ ಬೆದರು ಗೊಂಬೆಯಾಗಿರದೆ, ಗುಂಡಯ್ಯನೆಂಬ ಭಾವನೆಯಿದ್ದು, ಆತನೇ ತಮ್ಮ ಬೆಳೆಯ ರಕ್ಷಕನೆಂದು ನಂಬಿದ್ದಾರೆ. ಅಲ್ಲದೆ ಬೆಚ್ಚುಗಡಿಗೆಯನ್ನು ಇಟ್ಟ ಹೊಲ ಹುಲುಸಾಗುವುದೆಂಬ ಭಾವನೆಯಿದೆ. ಅಲ್ಲದೆ ಚಳಿಗಾಲದಲ್ಲಿ ಬೆಳೆಗಳಿಗೆ



ಹಿತಕರವಾದ ಗಾಳಿ ಬೀಸಿದಾಗ ಅದನ್ನು 'ಕುಂಬಾರ ಗುಂಡಯ್ಯ'ನ ಗಾಳಿಯೆಂದು ಕರೆಯುವುದರ ಮೂಲಕ ಗುಂಡಯ್ಯನಿಗೆ ಕೃಷಿ ಕಾರ್ಯದಲ್ಲಿ ಒಂದು ಮಹತ್ವದ ಸ್ಥಾನ ನೀಡಿ ಗೌರವಿಸಿದ್ದಾರೆ.

ಕೇತಲದೇವಿ ಗುಂಡಯ್ಯನ ಮಡದಿಯೆಂದು ಹೇಳಿ, ಅವರಿಬ್ಬರ ಆದರ್ಶ ದಾಂಪತ್ಯ ಜೀವನವನ್ನು ತ್ರಿಪದಿಯೊಂದರ ಮೂಲಕ ವರ್ಣಿಸಿದ್ದಾರೆ.

**ಮಡದಿ ಕೇತಲದೇವಿ ಒಡನಾಡಿ ಗುಂಡನಿಗೆ**
**ಎಡೆಬಿಡದೆ ಸೇವೆ ಮಾಡುತಲಿ - ಬತ್ತಿಯೊಳು**
**ಬಿಡದೇ ಎಣ್ಣೆಯುರಿದಂತೆ.**

ಅವರಿಬ್ಬರ ದಾಂಪತ್ಯ ಜೀವನ ಎಣ್ಣೆ ಬತ್ತಿಯಂತೆ ಒಂದಕ್ಕೊಂದು ಪೂರಕ. ಎಣ್ಣೆಯಿಲ್ಲದೆ ಬತ್ತಿ ಉರಿಯುವುದಿಲ್ಲ. ಬತ್ತಿಯಿಲ್ಲದೆ ದೀಪಬೆಳಗಲು ಸಾಧ್ಯವಿಲ್ಲ. ಆಕೆ ಗಂಡನಿಗೆ ನೆರಳಾಗಿ ಕಷ್ಟ ಸುಖದಲ್ಲಿ ಭಾಗಿಯಾಗಿದ್ದ ಮಹಾಶರಣೆ. ಆಕೆ ಶಿವನ ಪರಮಭಕ್ತೆ. ಶಿವನಪೂಜೆ ಹಾಗೂ ಗಂಡನ ಸೇವೆಯಲ್ಲಿ ತನ್ನನ್ನು ಅರ್ಪಿಸಿಕೊಂಡಿದ್ದ ಮಹಾಸಾಧ್ವಿ.

ಕುಂಬಾರ ಗುಂಡಯ್ಯನಿಗೆ ಕಾಯಕ ಒಂದು ವ್ರತವಾಗಿತ್ತು. ಕಾಯಕ ಶಿವನ ಪೂಜೆಯಾಗಿತ್ತು. ಕಾಯಕ ಅವನ ಬದುಕಿನ ಉಸಿರಾಗಿತ್ತು. ಶಿವನಾಮ ಸ್ಮರಣೆ ಮಾಡುತ್ತಲೇ ಕಾಯಕವನ್ನು ಮಾಡುತ್ತಿದ್ದ ನಿಜಶರಣ. ಅವನ ದೃಷ್ಟಿಯಲ್ಲಿ ಕಾಯಕವೆಂದರೆ -

**ಕಾಯಕವೆ ಶಿವಭಕ್ತಿ ಕಾಯಕವೆ ಶಿವಭಜನೆ**
**ಕಾಯಕವೆ ಲಿಂಗ ಶಿವಪೂಜೆ - ಶಿವಯೋಗ**
**ಕಾಯಕವೆ ಕಾಯ್ವ ಕೈಲಾಸ.**

ಹದವಾದ ಮಣ್ಣಿನಿಂದ ಮಡಿಕೆಗಳನ್ನು ಮಾಡುತ್ತಾ ಒಣಗಿದ ಮಡಿಕೆಯಿಂದ ನಾದವನ್ನು ಹೊರಹೊಮ್ಮಿಸುತ್ತಾ ಶಿವ ಧ್ಯಾನ ಮಾಡುತ್ತಾ ಮೈಮರೆತು ಕುಣಿಯುತ್ತಿದ್ದ ಶಿವಯೋಗಿ. ಅವನು ಮಾಡುವ ಕಾಯಕದಲ್ಲಿಯೇ ಶಿವನನ್ನು ಕಾಣುತ್ತಿದ್ದ. ಅವನು ಶಿವನ ಸ್ಮರಣೆಯಲ್ಲಿಯೇ ತಲ್ಲೀನನಾಗಿ ಕುಣಿಯುತ್ತಿದ್ದನೆಂದರೆ, ನಮ್ಮ ಜನಪದರು ಹೇಳುವಂತೆ -

**ಬಂದವರ ಹೋದವರ ಎಂದುದು ತಾನರಿಯ**
**ಒಂದೆ ಗತ್ತಿನಲಿ ಗಡಿಗೆಗಳ - ನುಡಿಸುತಲಿ**
**ಅಂದದಲಿ ಗುಂಡ ಕುಣಿಯುತಲಿ.**

ಅವನು ಮೈಮರೆತು ಕುಣಿಯುವಾಗ ಬಾಹ್ಯ ಪ್ರಪಂಚದ ಆಗು ಹೋಗುಗಳನ್ನು ಮರೆಯುತ್ತಿದ್ದ. ಯಾರು ಬಂದರು, ಯಾರು ಹೋದರು ಎಂಬ ಪರಿವೇ ಅವನಿಗಿರಲಿಲ್ಲ. ಅಂತಹ ಕಾಯಕ ನಿಷ್ಠೆ ಕುಂಬಾರ ಗುಂಡಯ್ಯನದು.

ಅವನು ಮಾಡಿದ ಗಡಿಗೆಗಳನ್ನು ಶಿವಶರಣರಿಗೆ ಮಾತ್ರ ಮಾರುತ್ತಿದ್ದ ಎಂಬುದನ್ನು ಜನಪದರು ತುಂಬಾ ಸೊಗಸಾಗಿ ಬಣ್ಣಿಸಿದ್ದಾರೆ.

**ಹರುಷದಲಿ ಗಡಿಗೆಗಳ ಶರಣರಿಗೆ ಮಾರುತಲಿ**
**ಸರಸದಲಿ ಇದ್ದು ಸತಿಯೊಡನೆ - ಗುಂಡಯ್ಯ**
**ಸರಿಯಾರು ಶಿವನೆ ಶರಣರಿಗೆ.**

ಶಿವನ ಧ್ಯಾನ ಮಾಡುತ್ತಾ ಕಾಯಕ ಮಾಡುವಾಗ ಗುಂಡಯ್ಯನಿಗೆ ಆಯಾಸವೇ ಆಗುತ್ತಿರಲಿಲ್ಲ. ಅವನು ಗಡಿಗೆಯನ್ನು ಬಾರಿಸುತ್ತಾ ಮೈಮರೆತು ಕುಣಿಯುವುದನ್ನು ದಿವ್ಯದೃಷ್ಟಿಯಿಂದ ನೋಡಿದ ಶಿವ ತನಗರಿವಿಲ್ಲದೆಯೇ ತಲೆ ತೂಗುವುದನ್ನು ಮಡದಿ ಪಾರ್ವತಿ ಗಮನಿಸಿ ಕಾರಣವೇನು ಎಂದು ಕೇಳುತ್ತಾಳೆ -

**ದಿನದಂತೆ ಗುಂಡಯ್ಯ ದಣಿಯದಲೆ ಕಾಯಕವ**
**ಕುಣಿಕುಣಿದು ಗಡಗಿ ಬಾರಿಸುತ - ನಡೆಸಿರಲಿ**
**ಮನಮೆಚ್ಚಿ ಶಿವನು ತಲೆದೂಗಿ.**
**ನಸುನಗುವ ಪಾರ್ವತಿಯು ನೊಸಲಗಣ್ಣನ ಮಡದಿ**
**ಹುಸಿನಗೆಯ ಮಾತ ಶಿವಗಾಡಿ - ಕೇಳಿದಳು**
**ಹೊಸತು ತಲೆಯೇಕೆ ತೂಗುವಿರಿ.**

ಪಾರ್ವತಿಯ ಮಾತಿಗೆ ಶಿವ ಭೂಲೋಕದಲ್ಲಿ ನನ್ನ ಪರಮಭಕ್ತ ಕುಂಬಾರ ಗುಂಡಯ್ಯ ಕಾಯಕ ಮಾಡುತ್ತಾ ಗಡಿಗೆಗಳನ್ನು ನುಡಿಸುತ್ತಾ ತಾಳಕ್ಕೆ ಹೆಜ್ಜೆ ಹಾಕುತ್ತಾ ಕುಣಿಯುವುದನ್ನು ಕಂಡು ತಲೆದೂಗಿದೆ ಎಂದು ಹೇಳುತ್ತಾನೆ.

**ಭೂಮಿಯೊಳು ಗುಂಡಯ್ಯ ಸೀಮೆ ಮೀರಿದ ಭಕ್ತ**
**ನೇಮದಲಿ ನುಡಿಸಿ ಗಡಿಗೆಗಳ - ಕುಣಿಯುವನು**
**ತೋಮ ಧಿತ್ತಯ್ಯ ಹೆಜ್ಜೆಯೊಳು.**

ಶಿವನು ಗುಂಡಯ್ಯನನ್ನು ಸೀಮೆ ಮೀರಿದ ಭಕ್ತ ಎಂದು ಕರೆದಿರುವುದು ಔಚಿತ್ಯಪೂರ್ಣವಾಗಿದೆ. ಮಡದಿ ಪಾರ್ವತಿಯ ಕೋರಿಕೆಯನ್ನು ಶಿವ ಮನ್ನಿಸುತ್ತಾನೆ.

**ಕುಣಿತ ನೋಡುವ ಬಯಕೆ ಎನಿತು ಹೇಳಲಿ ಶಿವನೆ**
**ತಣಿಸೆನ್ನ ಮನವ ಕುಣಿದಾಡಿ - ಗಿರಿಜೆನೆಲು**
**ಝುಣಕಿದವು ಗೆಜ್ಜೆ ಕಾಲೊಳಗೆ.**

ನಿನ್ನ ಬಯಕೆಯನ್ನು ಈಡೇರಿಸುತ್ತೇನೆ. ನನ್ನೊಂದಿಗೆ ಭೂಲೋಕಕ್ಕೆ ಬಾ. ನಾನು ಗುಂಡಯ್ಯನ ಜೊತೆ ಕುಣಿಯುತ್ತೇನೆ. ನೋಡಿ ಕಣ್ತುಂಬಿಸಿಕೋ ಎಂದು ಹೇಳಿ ಭೂಲೋಕಕ್ಕೆ ಮಡದಿಯೊಂದಿಗೆ ಧಾವಿಸುತ್ತಾನೆ.

**ಹೋಗಿ ಕುಣಿಯುವೆ ದೇವಿ ತೂಗಿ ಗುಂಡನ ಕೂಡ**
**ನೀಗು ನೋಡುತಲಿ ನಿನ್ನಾಸೆ – ಶಿವನೆದ್ದು**
**ಸಾಗಿ ಸೇರಿದನು ಭೂಲೋಕ.**

ಗುಂಡಯ್ಯ ಕಾಯಕದಲ್ಲಿ ನಿರತನಾಗಿ ಕುಣಿತದಲ್ಲಿ ತನ್ಮಯನಾಗಿರುವಾಗ ಶಿವ ತನ್ನೆಡೆಗೆ ಬಂದುದು ಅವನಿಗೆ ಗೊತ್ತಾಗಲಿಲ್ಲ.

**ಶಿವಬಂದು ನಿಂತಿರಲು ಶಿವಭಕ್ತ ಗುಂಡಯ್ಯ**
**ಶಿವನೆಂಬುದರಿಯ ಕಾಯಕದ – ಗುಂಗಿನೊಳು**
**ಭವದೊಳಗೆ ಮಡಕಿ ನುಡಿಸುತಲಿ.**

ಅವನು ಹೆಜ್ಜೆ ಹಾಕುತ್ತಾ ಕುಣಿಯುವ ಭಂಗಿಯನ್ನು ಜನಪದರು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ.

**ಮಡಿಕೆಗಳ ಬಾರಿಸುತ ತೊಡಗಿದ್ದ ಕುಣಿತದೊಳು**
**ಹೆಡೆಯೆತ್ತಿ ನಾಗ ಮಣಿದಂತೆ – ಗುಂಡಯ್ಯ**
**ತಡೆ ತಡೆದು ಹೆಜ್ಜೆ ಹಾಕುತಲಿ.**

ಜನಪದರ ದೃಷ್ಟಿಯಲ್ಲಿ ಅವನು ಕುಣಿಯುವ ರೀತಿ 'ಹೆಡೆಯೆತ್ತಿ ನಾಗ ಮಣಿದಂತೆ' ಸಾದೃಶ್ಯ ಅವರ ಕಲ್ಪನಾ ಶಕ್ತಿಯನ್ನು ಅನಾವರಣಗೊಳಿಸುತ್ತದೆ. ಒಬ್ಬ ಶ್ರೇಷ್ಠ ಕವಿಯ ಕಾವ್ಯಕ್ಕಿಂತ ಕಡಿಮೆಯಿಲ್ಲ ಎನಿಸುತ್ತದೆ. ಅವರದು ಅಸಾಧಾರಣ ಪ್ರತಿಭೆ.

ಜಂಗಮ ರೂಪಿಯಾದ ಪರಶಿವನನ್ನು ಕಂಡ ಕೂಡಲೇ ಗುಂಡಯ್ಯನಲ್ಲಿ ವಿದ್ಯುತ್ ಸಂಚಾರವಾದಂತಾಗಿ ಚೈತನ್ಯ ತುಂಬಿಕೊಂಡಿತು. ಸಂತೋಷದಿಂದ ಹೆಜ್ಜೆ ಹಾಕತೊಡಗಿದ. ಆತನ ಆಗಿನ ಸ್ಥಿತಿಯನ್ನು ಕಂಡು ಜನಪದರು –

**ಹರುಷದಲಿ ಗುಂಡಯ್ಯ ಹರನೆಂದು ಜಂಗಮಗೆ**
**ತಿರುಗತಲಿ ಸುತ್ತ ಬಾರಿಸುತ – ಗಡಿಗೆಗಳ**
**ತರತರದಿ ಕುಣಿಯ ಮೈಮರೆತು.**

ಕುಂಬಾರ ಗುಂಡಯ್ಯನೊಂದಿಗೆ ಶಿವನು ಹೆಜ್ಜೆ ಹಾಕುತ್ತಾ ಆವೇಶದಿಂದ ಕುಣಿಯುವಾಗಿನ ದೃಶ್ಯವನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ.

**ಜಡೆ ಕೆದರಿ ಹರಿದಾಡಿ ಮಡಗಿದವು ದಿಕ್ಕುಗಳು**
**ಮುಡಿಯೊಳಗೆ ಗಂಗೆ ತುಳಕಾಡಿ – ಲೋಕದಲು**
**ನಡುಗಿದವು ಶಿವನ ಹೆಜ್ಜೆಯೊಳು.**
**ಪೆರೆಗೊರೆಯು ಓರ್ಯಾಗಿ ನರಲೋಕ ಇರುಳಾಗಿ**
**ಹರನ ಕಾಲ್ಗೆಜ್ಜೆ ಘಿಲಿಘಿಲಿಸಿ – ಕುಣಿಯುತಲಿ**
**ಸರಸದಲಿ ತಾನ ಕೊಡುತಿರಲಿ.**

ಶಿವನು ಕುಣಿಯುವ ಆವೇಶಕ್ಕೆ ಮುಡಿಕಟ್ಟಿದ ಜಡೆಯು ಕೆದರಿ ಹಾರಾಡಿ, ನಾಲ್ಕು ದಿಕ್ಕುಗಳಿಗೂ ಹರಡಿತು. ಶಿವನ ಮುಡಿಯೊಳಗೆ ಅಡಗಿದ್ದ ಗಂಗೆ ಧಾರಾಕಾರವಾಗಿ ಸುರಿದು ಇಡೀ ಲೋಕವೇ ಭಯಪಡುವಂತ ವಾತಾವರಣ ಸೃಷ್ಟಿಯಾಯಿತು. ಅಷ್ಟೇ ಅಲ್ಲ, ಶಿವನ ಶಿರದ ಮೇಲಿದ್ದ ಚಂದ್ರನೂ ಓರೆಯಾಗಿ ಭೂಲೋಕವೆಲ್ಲ ಕತ್ತಲಲ್ಲಿ ಮುಳುಗಿತು. ಸಾಗರವು ಉಕ್ಕಿ ಲೋಕವೆಲ್ಲ ಆವರಿಸಿತು. ಈ ಭಯಾನಕ ಸನ್ನಿವೇಶವನ್ನು ಕಂಡು ಶಿವಗಣವು ಭಯದಿಂದ ತತ್ತರಿಸಿ ಹೇಗಾದರೂ ಮಾಡಿ ಶಿವನು ಕುಣಿಯುವುದನ್ನು ನಿಲ್ಲಿಸುವಂತೆ ಪಾರ್ವತಿಯಲ್ಲಿ ಮೊರೆ ಹೋದರು. ಜನಪದರ ಈ ಸನ್ನಿವೇಶವನ್ನು ವರ್ಣಿಸಿದ ರೀತಿಯಿದು.

**ಉಕ್ಕಿ ಸಾಗರ ಚೆಲ್ಲಿ ಮುಕ್ಕುತಲಿ ಲೋಕಗಳ**
**ಬಿಕ್ಕಿ ಶಿವಗಣವು ಹೌಹಾರಿ – ಪಾರ್ವತಿಗೆ**
**ಉಕ್ಕರಿಸಿ ಬಿತ್ತು ಅಡಿಗಳಿಗೆ.**
**ಜಗದಂಬೆ ಶಿವ ಮರೆತು ಜಗದೊಳಗೆ ಕುಣಿಯುವನು**
**ಜಗಮುಳುಗಿ ಗೋಳು ಶಿವಲೋಕ – ಉಳಿಯುವುದೆ**
**ನಗೆಯಲ್ಲ ನಿಲಿಸು ಶಿವಗುಣಿತ.**
**ನೋಡಿ ಗಿರಿಜೆಯು ತಿಳಿದು ಬೇಡಿದಳು ಕೈಮುಗಿದು**
**ಕೇಡೆನಲು ಶಿವನು ಕುಣಿಯುವುದ – ನಿಲ್ಲಿಸಲು**
**ತೀಡಿ ಬೀಸಿದವು ಶಿವಗಾಳಿ.**

ಪಾರ್ವತಿಯು ಪ್ರಾರ್ಥನೆಯಂತೆ ಶಿವ ಕುಣಿಯುವುದನ್ನು ನಿಲ್ಲಿಸಲು ತಂಗಾಳಿ ಬೀಸಿ ಎಲ್ಲವೂ ಮಂಗಳವಾಯಿತು. ಕುಂಬಾರ ಗುಂಡಯ್ಯನ ಕಾಯಕ ನಿಷ್ಠೆ, ಭಕ್ತಿ ಬಗ್ಗೆ ಸಂತೃಪ್ತನಾದ ಶಿವ ಸಂತೋಷದಿಂದ, ನೀನೊಬ್ಬ ಶ್ರೇಷ್ಠ ಭಕ್ತ, ಮಹಾ ಶಿವಶರಣ, ನಿನ್ನ ಭಕ್ತಿಗೆ ಮೆಚ್ಚಿದ್ದೇನೆ, ಕೈಲಾಸಕ್ಕೆ ಹೋಗೋಣ ನಡೆ ಎನ್ನುತ್ತಾನೆ. ಆಗ ಗುಂಡಯ್ಯ ಹೇಳಿದ ಮಾತು ಕಾಯಕ ತತ್ತ್ವಕ್ಕೆ ನೀಡಿದ ಮಹೋನ್ನತ ಗೌರವವಾಗಿದೆ. ನಿನ್ನ ಮಾತು ಕೇಳಿ ನಾನು ಕೈಲಾಸಕ್ಕೆ ಬಂದರೆ ಈ ಕಾಯಕವನ್ನು ಮಾಡುವವರು ಯಾರು? ನಾನು ಇಲ್ಲಿಯೇ ಇದ್ದು



ಕಾಯಕ ಮಾಡುತ್ತೇನೆ ಎನ್ನುತ್ತಾನೆ. ಕೈಲಾಸದ ಪದವಿಗಿಂತ ಭೂಲೋಕದಲ್ಲಿ ಮಾಡುವ ಕಾಯಕವೇ ಶ್ರೇಷ್ಠ ಎಂಬ ಸಂದೇಶವನ್ನು ಸಾರಿದ್ದಾನೆ.

**ಬೇಡೆನೆಗೆ ಕೈಲಾಸ ಬಾಡುವುದು ಕಾಯಕವು**
**ನೀಡೆನೆಗೆ ಶಿವನೆ ಕಾಯಕವ – ಕುಣಿದಾಡಿ**
**ನಾಡ ಹಂದರಕ್ಕೆ ಹಬ್ಬಿಸುವೆ.**

ಗುಂಡಯ್ಯ ಬೇಡಿದ ವರವಾದರೂ ಏನು? ನಾನು ಮಡಿಕೆಯನ್ನು ಚೆನ್ನಾಗಿ ನುಡಿಸುವ ನೈಪುಣ್ಯತೆಯನ್ನು ಕರುಣಿಸು. ನಾನು ನುಡಿಸುವ ಕಲೆಯನ್ನು ಜನರು ಅಸ್ವಾದಿಸುವ ವರವನ್ನು ನೀಡು ಎಂದು ಪ್ರಾರ್ಥಿಸುತ್ತಾನೆ. ಶಿವನು ಅವನು ಬೇಡಿದ ವರವನ್ನು ನೀಡಿ ಬಯಲಾಗುತ್ತಾನೆ. ಜನಪದರು ಬಳಸಿರುವ 'ಬಯಲು' ಪದ ಅರ್ಥಪೂರ್ಣವಾಗಿದೆ.

**ಕರುಣಿಸಿದೆ ಗುಂಡಯ್ಯ ಹರಕೇಳಿ ನಸುನಗುತ**
**ಮಿರುಗಿ ಮಿಂಚುತಲಿ ಬೈಲಾದ – ಮಡಿಕೆಯನು**
**ವರಪಡೆದು ಗುಂಡ ನುಡಿಸಿದನು.**

**ಐದು ತಳದೊಳು ಮನವ ನಾದಿ ಕಾಯಕಮಾಡಿ**
**ಸಾಧಿಸಿದ ಶರಣ ಸಮರಸವ – ಗುಂಡಯ್ಯ**
**ಸೇದಿ ಆರರೊಳು ಬಯಲಾದ.**

ಈ ಮೇಲಿನ ತ್ರಿಪದಿ ಆಧ್ಯಾತ್ಮಕತೆಗೆ ಸಂಬಂಧಿಸಿದ್ದು. ಶರಣರ ಸ್ಥಳಗಳಾದ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ. ಶರಣನು ಆಧ್ಯಾತ್ಮಿಕ ಸಾಧನೆಯಿಂದ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಹಂತಗಳನ್ನು ದಾಟಿ ಐಕ್ಯಸ್ಥಳದಲ್ಲಿ ಗುಂಡಯ್ಯ ಶಿವನಲ್ಲಿ ಲೀನವಾದುದನ್ನು ನಮ್ಮ ಗ್ರಾಮೀಣರು ಮನಮುಟ್ಟುವಂತೆ ವರ್ಣಿಸಿದ್ದಾರೆ.

ಕುಂಬಾರ ಗುಂಡಯ್ಯನ ಕೃಪೆಯಿಂದ ಒಳ್ಳೆಯ ಗಾಳಿ ಬೀಸಿ ಹುಲಾಸಾದ ಬೆಳೆ ಬೆಳೆದು ಕಣದಲ್ಲಿ ಧಾನ್ಯದ ರಾಶಿಯ ತುಂಬಿ ಮನೆಯ ಕಣಜವನ್ನು ಸೇರುತ್ತದೆ ಎನ್ನುವಲ್ಲಿ ಗ್ರಾಮೀಣರು ಗುಂಡಯ್ಯನ ಬಗ್ಗೆ ತೋರಿದ ಪ್ರೀತಿ, ಆದರ, ಗೌರವ, ಭಕ್ತಿಯ ನಿದರ್ಶನವಾಗಿದೆ.

ಗುಂಡಯ್ಯನನ್ನ ಕುರಿತು ಹಾಡಿದ ಹಾಡುಗಳು ಕುಂಬಾರ ಗುಂಡಯ್ಯನೇ ನಮ್ಮ ಎದೆಯೊಳಗೆ ಕುಳಿತು ಹಾಡಿಸಿದ ಎನುವಲ್ಲಿ ಗುಂಡಯ್ಯನ ಬಗೆಗಿನ ಭಕ್ತಿಯ ದರ್ಶನವಾಗುತ್ತದೆ.

**ಹಂತಿಯದು ಹಾಡೆಂದು ಪಂತಕಟ್ಟಲು ಬೇಡ**
**ಕಂತಿ ಕರಗುವುದು ನಿಂತಲ್ಲೆ – ಗುಂಡಯ್ಯ**
**ಕುಂತು ಎದೆಯೊಳಗೆ.**
**ಶರಣು ಶರಣೆಂಬುವೆವು ಹರಣ ಹಾರುವ ತನಕ**
**ಕರುಣಿಸಿರಿ ಶರಣ ಗುಂಡಯ್ಯ – ನಮಗಿನ್ನು**
**ಹರಸರಿ ಹುಲುಸು ಹುಲ್ಪುಲ್ಲಿಗೊ.**

ಜನಪದರ ಮನಸ್ಸಿನಲ್ಲಿ ಕುಂಬಾರ ಗುಂಡಯ್ಯನ ನೆನಪು ಸದಾ ಹಚ್ಚಹಸಿರಾಗಿದೆ.

ಹರಿಹರ ಮಹಾಕವಿ ಹೇಳಿರುವಂತೆ

**ಆಡುವ ಗುಂಡಯ್ಯನ ಹೊಸ ನೃತ್ಯಂ**
**ನೋಡುವ ಶಿವನಂ ಮುಟ್ಟಿತು ಸತ್ಯಂ**

**ಮರ್ತ್ಯದ ದನಿ ಕೈಲಾಸದ ನೃತ್ಯಂ**
**ಸತ್ಯದ ದನಿ ಶಿವಲೋಕದ ನೃತ್ಯಂ.**

ನಾವು ಮಾಡುವ ಕಾಯಕ, ಮನಸ್ಸು ಪರಿಶುದ್ಧ ಹಾಗೂ ಪ್ರಾಮಾಣಿಕತೆಯಿಂದಿದ್ದಾಗ ಅದರ ಪ್ರಭಾವ ಎಲ್ಲದರ ಮೇಲಾಗುತ್ತದೆ ಎಂಬುದಕ್ಕೆ ಶರಣ ಗುಂಡಯ್ಯ ಒಂದು ಜ್ವಲಂತ ನಿದರ್ಶನವಾಗಿದ್ದಾನೆ. ಅವನ ದನಿ ಶಿವಲೋಕವನ್ನು ಮುಟ್ಟಿ ಶಿವನನ್ನು ಕುಣಿಸಿತೆಂಬುದು ಜನಪದರ ಒಂದು ಅಪೂರ್ವ ಕಲ್ಪನೆ. ಅವನ ವ್ಯಕ್ತಿತ್ವ ಅನುಪಮವಾದುದು. ಸುಳಿವ ಗಾಳಿಯಲ್ಲಿ, ಬೆಳೆವ ಬೆಳೆಯಲ್ಲಿ, ಉಣ್ಣುವ ಊಟದಲ್ಲಿ, ಮದುವೆ ಮನೆಯ ಐರಣಿಯಲ್ಲಿ, ಹೊಲದ ಬೆದರುಗೊಂಬೆಯಲ್ಲಿ, ಅನ್ನ ಮಾಡುವ ಮಡಕೆಯಲ್ಲಿ ಕುಂಬಾರ ಗುಂಡಯ್ಯನನ್ನು ಕಾಣುತ್ತೇವೆ. ಶರಣರ ನಡುವೆ, ಕಾಯಕ ಪ್ರೇಮಿಗಳ ನಡುವೆ, ಆಧ್ಯಾತ್ಮಿಕ ಜೀವಿಗಳ ನಡುವೆ ಅವನಿನ್ನೂ ಜೀವಂತವಾಗಿದ್ದಾನೆ. ಗ್ರಾಮೀಣರ ಉದಾತ್ತ, ಆದರ್ಶ ಕಾಯಕ ಧರ್ಮ ಮತ್ತು ಕಾಯಕ ಸಿದ್ಧಾಂತವನ್ನು ಬದುಕಿನಲ್ಲಿ ಅಳವಡಿಸಿಕೊಂಡು ಆ ಕಾಯಕಕ್ಕೆ ಗೌರವ, ಮಹತ್ವ ತಂದುಕೊಟ್ಟು, ಆ ಮೂಲಕ ಶಿವನ ಒಲುಮೆಗೆ ಪಾತ್ರನಾದ ಅಸಾಧಾರಣ ವ್ಯಕ್ತಿಯಾಗಿ ಕುಂಬಾರ ಗುಂಡಯ್ಯ ಸದಾ ನಮ್ಮೊಂದಿಗೆ ಇರುವಂತೆ ಭಾಸವಾಗುತ್ತಿದ್ದಾನೆ. ಬಾನಿನಲ್ಲಿ ಮಿನುಗುವ ತಾರೆಯಾಗಿದ್ದಾನೆ.

## ಜಂಗಮ ಪರ್ವತ

ಒಂದು ಸಮೀಕ್ಷೆಯ ಪ್ರಕಾರ ಕರ್ನಾಟಕದಲ್ಲಿ ೫೦೦೦ ಧರ್ಮಗುರುಗಳಿದ್ದಾರೆ. ಧರ್ಮಗುರುಗಳಿಗೆ ಕೊರತೆಯಿಲ್ಲ. ಆದರೆ ಪ್ರಜ್ಞಾವಂತ, ಪ್ರಬುದ್ಧ, ಕಾಯಕಯೋಗಿ, ಸರ್ವಧರ್ಮಗಳನ್ನು ಪ್ರೀತಿಸುವ ಸಮರ್ಪಣಾ ಭಾವನೆಯಿಂದ ಸರ್ವ ಸಮಾಜದ ಸೇವೆ ಸಲ್ಲಿಸುವ, ಎಲ್ಲರೂ ನಮ್ಮವರೆನ್ನುವ, ಮಕ್ಕಳೇ ದೇವರೆಂದು ಒಪ್ಪಿಕೊಳ್ಳುವ ಧರ್ಮಗುರುಗಳ ಕೊರತೆ ಇದೆ. ಇದನ್ನು ಸಮರ್ಥವಾಗಿ ನೀಗಿದವರು ೮೯ ವರ್ಷಗಳ ಮಹಾಜೀವನದಲ್ಲಿ ತ್ರಿವಿಧ ಅಲ್ಲ ವಿವಿಧ ದಾಸೋಹಗಳ ಮೂಲಕ ಅಂದರೆ ಅನ್ನ, ಆಸರೆ, ಅಕ್ಷರ, ಅರಿವು, ಅಭಯ, ಆರೋಗ್ಯ ಮತ್ತು ಭಕ್ತಿದಾಸೋಹಗಳನ್ನು ಅಕ್ಕರೆಯಿಂದ ಅಪ್ಪಿಕೊಂಡು ಮಾಡಿ ಮರೆತು ವಿರಾಗಿಯಾದರು. ಮಾಡಿ ಮೌನವಾಗಿ ದೇವರೇ ಆದರು. ಹೀಗೆ ಸಾಮಾನ್ಯರ ಹೃದಯಮಂದಿರದಲ್ಲಿ ಚಿರಸ್ಥಾಯಿಯಾಗಿ ನಡೆದಾಡುವ ದೇವರೇ ಆದರು. ೧೨ನೇ ಶತಮಾನದಲ್ಲಿ ಮಹಾಮನೆ ಅದ್ಭುತವಾದರೆ ೨೧ನೇ ಶತಮಾನದಲ್ಲಿ ಶ್ರೀ ಸಿದ್ಧಗಂಗಾಮಠವೇ ಅದ್ಭುತ. ೧೨ನೇ ಶತಮಾನದಲ್ಲಿ ವೈರಾಗ್ಯನಿಧಿ ಅಲ್ಲಮಪ್ರಭುಗಳು ಅಚ್ಚರಿಯಾದರೆ ೨೧ನೇ ಶತಮಾನದಲ್ಲಿ ಪೂಜ್ಯರೇ ಅಚ್ಚರಿಯಾಗಿದ್ದಾರೆ.

ಈ ಹಿನ್ನಲೆಯಲ್ಲಿ ನೋಡಿದಾಗ ೨೦೦೯ರಲ್ಲಿ ಪೂಜ್ಯರ ಶತಮಾನೋತ್ಸವ ಸಂದರ್ಭದಲ್ಲಿ ಕೊಪ್ಪಳದ ಗವಿಸಿದ್ಧೇಶ್ವರಮಠದ ಈಗಿನ ಜಗದ್ಗುರುಗಳವರು ಶ್ರೀ ಶಿವಕುಮಾರ ಮಹಾಶಿವಯೋಗಿಗಳವರನ್ನು ಕುರಿತು ಉತ್ತರದಲ್ಲಿ ಗೌರಿಶಂಕರ ಪರ್ವತ (ಮೌಂಟ್ ಎವರೆಸ್ಟ್) ದಕ್ಷಿಣದಲ್ಲಿ ಜಂಗಮ ಪರ್ವತ (ಸೈಂಟ್ ಎವರೆಸ್ಟ್) ಎಂದು ವ್ಯಕ್ತಪಡಿಸಿರುವುದು ಸ್ತುತ್ಯ ಹಾಗೂ ಸತ್ಯವೇ ಆಗಿದೆ. ಈ ಮೂಲಕ ಪೂಜ್ಯ ಲಿಂ. ಶ್ರೀ ಶ್ರೀ ಶಿವಕುಮಾರ ಮಹಾಶಿವಯೋಗಿಗಳವರು ಜಂಗಮ ಪರ್ವತವೇ ಆಗಿ ಎಲ್ಲರ ಆರಾಧ್ಯದೈವವೇ ಆಗಿದ್ದಾರೆ.

**ಬಿ.ಎಂ. ಪರಮೇಶ್ವರಪ್ಪ**
**ನಿವೃತ್ತ ಕಾರ್ಯಪಾಲಕ ಅಭಿಯಂತರರು**
**ಬೆಂಗಳೂರು**

## ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರಿಗೆ ಸಾತ್ವಿಕ ಪ್ರಶಸ್ತಿ



ಹಿರಿಯ ಜಾನಪದ ವಿದ್ವಾಂಸರು, ಸಾಹಿತಿಗಳು, ಪತ್ರಕರ್ತರು ಹಾಗೂ ಸಿದ್ಧಗಂಗಾ ಮಾಸಪತ್ರಿಕೆಯ ಸಹ ಸಂಪಾದಕರಾದ ಶ್ರೀ ಸಿದ್ಧಗಂಗಪ್ಪನವರನ್ನು ಹಿರಿಯ ವಿದ್ವಾಂಸ, ನಿಘಂಟುತಜ್ಞ ಪ್ರೊ. ಟಿ.ಆರ್. ಮಹಾದೇವಯ್ಯನವರ ಹೆಸರಿನಲ್ಲಿ ನೀಡಲಾಗುವ 'ಸಾತ್ವಿಕ' ಪ್ರಶಸ್ತಿಗೆ ಆಯ್ಕೆ ಮಾಡಲಾಗಿದೆ. ಪ್ರಶಸ್ತಿಯು ೧೫ ಸಾವಿರ ನಗದು ಹಾಗೂ ಪ್ರಶಸ್ತಿ ಫಲಕವನ್ನು ಒಳಗೊಂಡಿರುತ್ತದೆ. ಜುಲೈ ೧೪ರ ಭಾನುವಾರ ದಂದು ಬೆಂಗಳೂರಿನ ಮಂಜುನಾಥ ನಗರದಲ್ಲಿರುವ ಶ್ರೀ ಸಿದ್ಧಗಂಗಾ ಸಮುದಾಯ ಭವನದಲ್ಲಿ ಬೆಳಿಗ್ಗೆ ೧೦ ಗಂಟೆಗೆ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆಯಲಿದ್ದು, ಬೆಂಗಳೂರು ಮಹಾನಗರ ಪಾಲಿಕೆಯ ಮಹಾಪೌರರಾದ ಶ್ರೀಮತಿ ಗಂಗಾಂಬಿಕೆ ಮಲ್ಲಿಕಾರ್ಜುನರವರು ಕಾರ್ಯಕ್ರಮವನ್ನು ಉದ್ಘಾಟಿಸಲಿದ್ದಾರೆ ಎಂದು ಶ್ರೀ ಬಸವ ವಿದ್ಯಾಭಿವೃದ್ಧಿ ಸಂಘ (ರಿ). ತಮ್ಮ ಪ್ರಕಟಣೆಯಲ್ಲಿ ತಿಳಿಸಿದೆ.

ಈ ಸಂದರ್ಭದಲ್ಲಿ ಸಿದ್ಧಗಂಗಾ ಪತ್ರಿಕಾ ಬಳಗ ಶ್ರೀ ಎಚ್.ಎಸ್.ಸಿದ್ಧಗಂಗಪ್ಪನವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತದೆ ಹಾಗೂ ಶುಭಾಶಯಗಳನ್ನು ಕೋರುತ್ತದೆ.



ಶ್ರದ್ಧಾಂಜಲಿ

## ವರ್ಣರಂಜಿತ ವ್ಯಕ್ತಿತ್ವ ಹೊಂದಿದ್ದ ಜ್ಞಾನಪೀಠ ಪುರಸ್ಕೃತ ಡಾ. ಗಿರೀಶ್ ಕಾರ್ನಾಡ್ ವಿಧಿವಶ



ಕನ್ನಡಕ್ಕೆ, ಕರ್ನಾಟಕಕ್ಕೆ ಜ್ಞಾನಪೀಠ ಪ್ರಶಸ್ತಿಯನ್ನು ತಂದುಕೊಟ್ಟ ಹೆಗ್ಗಳಿಕೆಗೆ ಪಾತ್ರರಾಗಿದ್ದ ಹಿರಿಯ ಸಾಹಿತಿ, ವಿದ್ವಾಂಸ, ಪ್ರಾಧ್ಯಾಪಕ, ಪ್ರಖರಚಿಂತಕ, ನಾಟಕಕಾರ, ಚಲನಚಿತ್ರ ನಟ, ರಂಗಭೂಮಿ ಕಲಾವಿದ, ನಿರ್ದೇಶಕ, ಪ್ರಬಲ ಹೋರಾಟಗಾರ - ಹೀಗೆ ಹಲವಾರು ವೈಶಿಷ್ಟ್ಯತೆಗಳಿಂದ ಕೂಡಿದ ಡಾ. ಗಿರೀಶ್ ಕಾರ್ನಾಡ್ ಅವರು ಜೂನ್ ೧೦, ೨೦೧೯ ರಂದು ವಿಧಿವಶರಾದರು. ಅವರಿಗೆ ೮೧ ವರ್ಷವಾಗಿತ್ತು.

ಜನನ ೧೯ ಮೇ, ೧೯೩೮. ಹುಟ್ಟಿದ ಸ್ಥಳ ಮಹಾರಾಷ್ಟ್ರದ ಮಥೇರಾನ್. ತಂದೆ ರಘುನಾಥ್ ಕಾರ್ನಾಡ್, ತಾಯಿ ಶ್ರೀಮತಿ ಕೃಷ್ಣಬಾಯಿ. ಅವರದು ಕೊಂಕಣಿ ಕುಟುಂಬ. ಮನೆ ಮಾತು ಕೊಂಕಣಿಯಾಗಿದ್ದರೂ ಮರಾಠಿ, ಕನ್ನಡದ ಪ್ರಭಾವ ಅವರ ಮೇಲಾಗಿತ್ತು.

**ಶಿಕ್ಷಣ:** ತಂದೆ ವೃತ್ತಿಯಲ್ಲಿ ವೈದ್ಯರಾಗಿದ್ದು, ಶಿರಸಿಯಲ್ಲಿ ಸೇವೆ ಸಲ್ಲಿಸುತ್ತಿದ್ದರಿಂದ ಶಿರಸಿಯ ಮರಾಠಿ ಶಾಲೆಯಲ್ಲಿ ಪ್ರಾಥಮಿಕ ಶಿಕ್ಷಣ ಪ್ರಾರಂಭವಾಯಿತು. ಅಲ್ಲಿ ಬರುತ್ತಿದ್ದ ಸಂಚಾರಿ ನಾಟಕ ತಂಡಗಳ ನಿರಂತರ ಒಡನಾಟದಿಂದ ಅವರಿಗೆ ನಾಟಕ ರಂಗದಲ್ಲಿ ಆಸಕ್ತಿ ಮೊಳಕೆಯೊಡೆಯಿತು. ತಂದೆ ಸೇವೆಯಿಂದ ನಿವೃತ್ತರಾದ ನಂತರ ಅವರ ಕುಟುಂಬ ಧಾರವಾಡಕ್ಕೆ ಬಂದು ನೆಲೆಸಿತು. ಆಗ ಅವರಿಗೆ ೧೪ ವರ್ಷ. ಅವರಲ್ಲಿ ಸುಪ್ತವಾಗಿದ್ದ ಸಾಹಿತ್ಯ ಪ್ರತಿಭೆ ಹೊರವೊಮ್ಮಲು ಧಾರವಾಡ ಭೂಮಿಕೆಯಾಯಿತು. ಧಾರವಾಡದಲ್ಲಿ ಸಾಹಿತ್ಯ ದಿಗ್ಗಜಗಳಾದ ಡಾ. ದ.ರಾ. ಬೇಂದ್ರೆ, ಶಂಭಾ ಜೋಷಿ, ಬೆಟಗೇರಿ ಕೃಷ್ಣಶರ್ಮ ಮೊದಲಾದವರ ಒಡನಾಟ ದೊರೆತು ಅವರ ಪ್ರಭಾವಕ್ಕೆ ಒಳಗಾದರು.

ಧಾರವಾಡದ ಬ್ಯಾಸೆಲ್ ಮಿಷನ್ ಹೈಸ್ಕೂಲ್‌ನಲ್ಲಿ ಪ್ರೌಢಶಿಕ್ಷಣ ಪಡೆದರು. ೧೯೫೮ ರಲ್ಲಿ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಬಿ.ಎ.ನಲ್ಲಿ ಗಣಿತಶಾಸ್ತ್ರದಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದರು. ಉನ್ನತ ಶಿಕ್ಷಣಕ್ಕಾಗಿ ಇಂಗ್ಲೆಂಡ್‌ಗೆ ಹೋದರು. ರ್‍ಹೋಡ್ಸ್ ವಿದ್ಯಾರ್ಥಿ ವೇತನ ಪಡೆದು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಆಕ್ಸ್‌ಫರ್ಡ್ ವಿಶ್ವವಿದ್ಯಾಲದಲ್ಲಿ ತತ್ತ್ವಶಾಸ್ತ್ರ, ರಾಜಕೀಯ ಶಾಸ್ತ್ರ, ಅರ್ಥಶಾಸ್ತ್ರವನ್ನು ಅಧ್ಯಯನ ಮಾಡಿದರು. ಗಣಿತದಿಂದ ಕಲಿತ ತರ್ಕಬದ್ಧತೆ, ವಿಚಾರ ಮಾಡುವಶಕ್ತಿ ತನಗೆ ನಾಟಕ ಬರೆಯುವುದರಲ್ಲಿ ನೆರವಾಯಿತು ಎಂದು ಒಂದು ಕಡೆ ಹೇಳಿಕೊಂಡಿದ್ದಾರೆ. ಅಲ್ಲಿ ಪ್ರತಿಭಾವಂತ ನಾಟಕಕಾರ, ಕಲಾವಿದರ ಜೊತೆ ಒಡನಾಡಿದರ ಫಲವಾಗಿ ಅವರಲ್ಲಿ ಸುಪ್ತವಾಗಿದ್ದ ಕಲಾಪ್ರತಿಭೆ ಹೊರಹೊಮ್ಮಿತು. ಉತ್ತಮ ವಾತಾವರಣವನ್ನು ಒದಗಿಸಿತು. ೧೯೬೩ ರಲ್ಲಿ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ವಿದ್ಯಾರ್ಥಿ ಸಂಘಕ್ಕೆ ಅಧ್ಯಕ್ಷರಾಗಿ ಆಯ್ಕೆಯಾದರು.

**ವೃತ್ತಿಜೀವನ :** ಶಿಕ್ಷಣವನ್ನು ಮುಗಿಸಿ ಭಾರತಕ್ಕೆ ಹಿಂತಿರುಗಿದ ಗಿರೀಶ್ ಕಾರ್ನಾಡ್ ಅವರು ಚೆನ್ನೈನ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಪ್ರೆಸ್‌ನಲ್ಲಿ ಕೆಲಸಕ್ಕೆ ಸೇರಿದರು. ಏಳು ವರ್ಷ ಸೇವೆ ಸಲ್ಲಿಸಿ ಮಾನಸಿಕ ದ್ವಂದ್ವಗಳಿಂದ ಕೆಲಸಕ್ಕೆ ವಿದಾಯ ಹೇಳಿದರು. ಅವರ ಈ ದಿಟ್ಟ ನಿರ್ಧಾರದಿಂದ ಅವರ ಸಂಬಂಧಿಕರು, ಆಪ್ತರು ವಿಚಲಿತರಾದರು. ಅವರಲ್ಲಿ ಮನೆ

ಸುಪ್ತವಾಗಿದ್ದ ಹೋರಾಟ ರಾಜೀನಾಮೆ ಮೂಲಕ ವಿದಾಯ ಹೇಳುವಂತಾಯಿತು. ಅಲ್ಲದೆ ಬರೆದೇ ಬದುಕಬಲ್ಲೆ ಎಂಬ ಆತ್ಮವಿಶ್ವಕ್ಕೆ ಜ್ವಲಂತ ನಿದರ್ಶನವಾಗಿತ್ತು. ಅವರಂದುಕೊಂಡಂತೆ ಪೂರ್ಣ ಬರಹಗಾರರಾದರು. ಮದ್ರಾಸ್ ಪ್ಲೇಯರ್ಸ್ ಎಂಬ ಹವ್ಯಾಸಿ ನಾಟಕದ ತಂಡದ ಜತೆ ಸೇರಿದರು. ೧೯೮೭-೮೮ ರಲ್ಲಿ ಶಿಕಾಗೋ ವಿಶ್ವವಿದ್ಯಾಲಯಕ್ಕೆ ಸಂದರ್ಶನ ಪ್ರಾಧ್ಯಾಪಕರಾಗಿ ಹೋಗಿ ನಾಟಕ ರಚನೆಗಾಗಿಯೇ ಫುಲ್‌ಬ್ರೈಟ್ ಸ್ಕಾಲರ್‌ಶಿಪ್ ಪಡೆದರು.

ಬಿ.ಎ. ಮುಗಿಸಿದ ನಂತರ ೧೯೬೧ ರಲ್ಲಿ ಗಿರೀಶ್ ಕಾರ್ನಾಡ್‌ರ ಮೊದಲ ನಾಟಕ ಯಯಾತಿ ಬರೆದರು. ಆಗ ಅವರಿಗೆ ೨೩ ವರ್ಷವಾಗಿತ್ತು. ಈ ಕೃತಿ ಕನ್ನಡ ರಂಗಭೂಮಿಯಲ್ಲಿ ಒಂದು ರೀತಿಯಲ್ಲಿ ಸಂಚಲನವನ್ನುಂಟು ಮಾಡಿತು. ಕಾರ್ನಾಡ್‌ರು ಆ ಕಾಲದ ನಮ್ಮ ಅನೇಕ ಕನ್ನಡ ಲೇಖಕರಂತೆ ಇಂಗ್ಲೀಷ್ ಕವಿತೆಗಳನ್ನು ಬರೆಯಲಾರಂಭಿಸಿದ್ದರು. ಯಯಾತಿ ನಾಟಕ ಬರೆದ ನಂತರ ಕನ್ನಡ ಅವರನ್ನು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಬರಮಾಡಿಕೊಂಡಿತು. ಅವರೇ ಹೇಳಿರುವಂತೆ ಕನ್ನಡ ಅವರ ಆಯ್ಕೆಯಾಗಿರಲಿಲ್ಲ. ಕನ್ನಡವೇ ಅವರನ್ನು ಆಯ್ಕೆಮಾಡಿಕೊಂಡಿತು. ಕನ್ನಡ ಅವರನ್ನು ಕೈಬಿಡಲಿಲ್ಲ. ಮುಂದೆ ಅವರು ಕನ್ನಡಕ್ಕೆ ರಾಷ್ಟ್ರೀಯ, ಅಂತಾರಾಷ್ಟ್ರೀಯ ಮಟ್ಟದಲ್ಲಿ ಘನತೆ, ಗೌರವದ ಸ್ಥಾನವನ್ನು ತಂದುಕೊಟ್ಟರು.

ಡಾ. ಗಿರೀಶ್ ಕಾರ್ನಾಡ್ ಅವರು ಹಯವದನ ನಾಟಕದಲ್ಲಿ ಪುರಾಣ, ಇತಿಹಾಸ, ವರ್ತಮಾನ, ಮನುಷ್ಯನ ಮೂಲಭೂತ ನಡವಳಿಕೆ ಹಾಗೂ ದ್ವಂದ್ವಗಳನ್ನು ಬೆಸೆಯುವ, ಇಡೀ ನಾಟಕವನ್ನು ರೂಪವಾಗಿಸುವ ಹೊಸ ರೂಪವೊಂದಕ್ಕೆ ಅವರು ನಾಂದಿ ಹಾಡಿದ್ದರು. ಮಹಾಭಾರತ, ಜನಪದ ಪುರಾಣಗಳಿಂದ ವಸ್ತುಗಳನ್ನು ಆಯ್ಕೆಮಾಡಿಕೊಂಡು ಅವನ್ನು ಸಮಕಾಲೀನ ವಸ್ತು ವಿಷಯಗಳಿಗೆ ಅವರು ಮುಖಾಮುಖಿಯಾಗಿದ್ದರು. ಇವರ ಬಹುಪಾಲು ನಾಟಕಗಳು ಭಾರತೀಯ ರಂಗಭೂಮಿಗೆ ಒಂದು ಹೊಸ ಆಯಾಮವನ್ನು ನೀಡಿದವು.

ಡಾ. ಗಿರೀಶ್ ಕಾರ್ನಾಡ್ ಅವರ ನಾಟಕಗಳು

೧. ಮಾನಿಷಾದ (೧೯೬೧)
೨. ಯಯಾತಿ (೧೯೬೧)
೩. ತುಘಲಕ್ (೧೯೬೪)
೪. ಅಂಜುಮಲ್ಲಿಗೆ (೧೯೭೭)
೫. ಹಿಟ್ಟಿನ ಹುಂಜ (೧೯೮೦)
೬. ನಾಗಮಂಡಲ (೧೯೮೮)
೭. ತಲೆದಂಡ (೧೯೯೦)
೮. ಅಗ್ನಿ ಮತ್ತು ಮಳೆ (೧೯೯೫)
೯. ಟಿಪ್ಪುವಿನ ಕನಸುಗಳು (೨೦೦೬)
೧೦. ಒಡಕಲು ಬಿಂಬ (೨೦೦೬)
೧೧. ಮದುವೆ ಆಲ್ಬಂ (೨೦೦೬)
೧೨. ಫ್ಲವರ್ಸ್ (೨೦೧೨)
೧೩. ರಾಕ್ಷಸತಂಗಡಿ (೨೦೧೮), ಇತ್ಯಾದಿ

ಇವುಗಳಲ್ಲಿ ತುಘಲಕ್ ಮತ್ತು ಯಯಾತಿ ನಾಟಕಗಳು ಹಲವು ಭಾಷೆಗಳಲ್ಲಿ ಅನುವಾದಗೊಂಡು ದೇಶ ವಿದೇಶಗಳಲ್ಲಿ ಪ್ರದರ್ಶನಗೊಂಡವು. ಇಬ್ರಾಹಿಂ ಅಲ್ಕಾಜಿಯವರು ನಿರ್ದೇಶಿಸಿದ 'ತುಘಲಕ್' ವಿದೇಶ ಪ್ರವಾಸ ಕೈಗೊಂಡಿತು. 'ಹಯವದನ' ಆಸ್ಟ್ರೇಲಿಯಾ, ಜರ್ಮನಿಗಳಲ್ಲಿ ಸ್ಥಳೀಯ ಕಲಾವಿದರಿಂದಲೇ ಪ್ರದರ್ಶನಗೊಂಡವು. 'ನಾಗಮಂಡಲ'ವನ್ನು ಅಮೇರಿಕದ ಗಥ್ರಿ ಥಿಯೇಟರಿನವರು ಪ್ರದರ್ಶಿಸಿದ್ದರು.

ಬಹುಮುಖ ಪ್ರತಿಭೆಯುಳ್ಳ ಡಾ. ಗಿರೀಶ್ ಕಾರ್ನಾಡ್ ಅವರು ೨೦೦೦ ರಿಂದ ೨೦೦೩ ರವರೆಗೆ ಕೇಂದ್ರ ಸಂಸ್ಕೃತ ಸಚಿವಾಲಯಕ್ಕೆ ಸೇರಿದ ಲಂಡನ್ನಿನ ಇಂಡಿಯಾ ಹೈ-ಕಮಿಷನ್‌ನ ನೆಹರೂ ಕೇಂದ್ರದ ನಿರ್ದೇಶಕರಾಗಿ ಕಾರ್ಯನಿರ್ವಹಿಸಿದರು. ನಂತರ ದೆಹಲಿಯ ಫಿಲ್ಮ್ ಆಂಡ್ ಟೆಲಿವಿಷನ್ ಇನ್ಸ್‌ಟಿಟ್ಯೂಟ್ ಆಫ್ ಇಂಡಿಯಾ ನಿರ್ದೇಶಕರಾಗಿ (೧೯೭೪-೭೫) ಸಂಗೀತ ನಾಟಕ ಅಕಾಡೆಮಿ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದರು.

**ನಟರಾಗಿ** : ರಂಗಭೂಮಿ ಹಾಗೂ ಚಲನಚಿತ್ರ ಕ್ಷೇತ್ರಗಳೆರಡರಲ್ಲಿಯೂ ನಟರಾಗಿ ತಮ್ಮ ಅಭಿಯನದ ಮೂಲಕ ಒಬ್ಬ ಶ್ರೇಷ್ಠ ನಟನೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು. 'ಈಡಿಪಸ್' ನಾಟಕದಲ್ಲಿ ದೊರೆ ಈಡಿಪಸ್‌ನ ಪಾತ್ರವನ್ನು ಅವರೇ ನಿರ್ವಹಿಸಿದ್ದರು. ನಾಟಕದ ಕಲೆಯನ್ನು ಹೇಗೆ ಉತ್ಕೃಷ್ಟ ಮಟ್ಟಕ್ಕೆ ತೆಗೆದುಕೊಂಡು ಹೋಗಬಹುದು ಎಂಬುದನ್ನು ಅವರು ತೋರಿಸಿಕೊಟ್ಟಿದ್ದರು. ಭಾರತೀಯ ಸಂಸ್ಕೃತಿಯ ಅರಿವು



ಅವರಲ್ಲಿ ಮನೆಮಾಡಿಕೊಂಡಿದ್ದರಿಂದಲೇ ತಾವು ಗ್ರಹಿಸಿದ್ದನ್ನು ನಾಟಕಗಳಲ್ಲಿ ಅನಾವರಣಗೊಳಿಸಿದ್ದರು. ರಂಗಭೂಮಿಗೆ ವೃತ್ತಿಪರತೆಯನ್ನು ಕಲಿಸಿಕೊಟ್ಟಿದ್ದರು.

ಗಿರೀಶ್ ಕಾರ್ನಾಡ್ ಅವರು ಚಲನಚಿತ್ರಗಳಲ್ಲಿ ಅಭಿನಯಿಸಿ ತಮ್ಮ ಪ್ರತಿಭೆಯನ್ನು ತೋರಿಸಿದ್ದರು. ೧೯೭೦ರಲ್ಲಿ ಕಾರ್ನಾಡ್ ಅವರೇ ಚಿತ್ರಕಥೆ ರಚಿಸಿ, ಸಂಸ್ಕಾರದಲ್ಲಿ ಪ್ರಮುಖ ಪಾತ್ರವಾದ ಪ್ರಾಣೇಶಾಚಾರ್ಯ ಪಾತ್ರವನ್ನು ಅಭಿನಯಿಸಿದರು. ಡಾ. ಯು.ಆರ್. ಅನಂತಮೂರ್ತಿಯವರ ಕಾದಂಬರಿ ಆಧಾರಿತ ಈ ಚಿತ್ರವನ್ನು ಪಟ್ಟಾಭಿರಾಮರೆಡ್ಡಿ ನಿರ್ಮಿಸಿ ನಿರ್ದೇಶಿಸಿದ್ದ ಈ ಚಿತ್ರ ಕನ್ನಡಕ್ಕೆ ಮೊದಲ ಸ್ವರ್ಣಕಮಲ ಪ್ರಶಸ್ತಿ ತಂದುಕೊಟ್ಟಿತು. ಚಿತ್ರರಂಗದಲ್ಲಿಯೇ ಒಂದು ಹೊಸ ಅಲೆಯನ್ನೇ ಎಬ್ಬಿಸಿತು. ಅಲ್ಲದೆ ವಂಶವೃಕ್ಷ, ಕಾನೂರು ಹೆಗ್ಗಡತಿ, ಸಂತ ಶಿಶುನಾಳ ಷರೀಫ್, ಆಘಾತ, ಎ.ಕೆ.೪೭, ಆ ದಿನಗಳು, ನಿಷ್ಕರ್ಷ, ಕೆಂಪೇಗೌಡ (ಕನ್ನಡ ಚಿತ್ರಗಳು), ನಿಶಾಂತ, ಮಂಥನ, ಉತ್ಸವ, ಭೂಮಿಕಾ, ಟೈಗರ್ ಜಿಂದಾ ಹೈ, ಎಕ್ ಥಾ ಟೈಗರ್ (ಹಿಂದಿ ಚಿತ್ರಗಳು), ತೆಲುಗಿನಲ್ಲಿ ಆನಂದಭೈರವಿ, ರಕ್ಷಕುಡು, ಧರ್ಮಚಕ್ರಂ, ಗುಣ, ಪ್ರೇಮಿಕುಡು, ತಮಿಳಿನಲ್ಲಿ ಹೇರಾಮ್, ಕಾದಲನ್ ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದ್ದರು. 'ಆನಂದ ಭೈರವಿ' ಚಿತ್ರದಲ್ಲಿನ ನೃತ್ಯ ಗುರುವಿನ ಪಾತ್ರದಲ್ಲಿನ ಅಭಿನಯ ಚಿತ್ರರಸಿಕರ ಮನಸ್ಸಿನಲ್ಲಿ ಹಚ್ಚಹಸಿರಾಗಿದೆ.

**ನಿರ್ದೇಶನ** : ಗಿರೀಶ್ ಕಾರ್ನಾಡ್ ಅವರು ವಂಶವೃಕ್ಷ, ತಬ್ಬಲಿಯು ನೀನಾದೆ ಮಗನೆ, ಕಾಡು, ಒಂದಾನೊಂದು ಕಾಲದಲ್ಲಿ, ಉತ್ಸವ, ಗೋಧೂಳಿ, ಕಾನೂರು ಹೆಗ್ಗಡತಿ ಮೊದಲಾದ ಚಿತ್ರಗಳನ್ನು ನಿರ್ದೇಶಿಸುವುದರ ಮೂಲಕ ತಾನೊಬ್ಬ ಚಿಂತನಶೀಲ ನಿರ್ದೇಶಕ ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು. ಇವರು ನಿರ್ದೇಶಿಸಿದ ಡಾ. ಎಸ್.ಎಲ್. ಭೈರಪ್ಪನವರ ಕಾದಂಬರಿ 'ವಂಶವೃಕ್ಷ' ಚಲನಚಿತ್ರಕ್ಕೆ ಉತ್ತಮ ನಿರ್ದೇಶನ ರಾಷ್ಟ್ರೀಯ ಪುರಸ್ಕಾರ ದೊರಕಿತು. ಡಾ. ದ.ರಾ. ಬೇಂದ್ರೆಯವರನ್ನು ಕುರಿತಾದ ಸಾಕ್ಷ್ಯಚಿತ್ರ, ಕಾರ್ನಾಡ್ ಅವರ ದೃಶ್ಯ ಮಾಧ್ಯಮ ಸಾಧನೆಗಳಲ್ಲೊಂದು ಎಂದು ಹೇಳಲು ಅಭಿಮಾನವೆನಿಸುತ್ತದೆ. 'ಉತ್ಸವ' ಹಾಗೂ 'ಚೆಲುವಿ' ಅವರ ನಿರ್ದೇಶನದಲ್ಲಿ ತೆರೆಕಂಡ ಹಿಂದಿ ಚಿತ್ರಗಳು. 'ಕನಕ-ಪುರಂದರ' ಇಂಗ್ಲೀಷ್ ಸಾಕ್ಷ್ಯಚಿತ್ರ ನಾನ್ ಫೀಚರ್ ಫಿಲ್ಮಂ ವಿಭಾಗದಲ್ಲಿ ಸ್ವರ್ಣಕಮಲ ಪಡೆದಿದೆ.

**ಪ್ರಶಸ್ತಿ-ಪುರಸ್ಕಾರ** : ಡಾ. ಗಿರೀಶ್ ಕಾರ್ನಾಡ್ ಅವರು ನಾಟಕಕಾರರಾಗಿ, ನಿರ್ದೇಶಕರಾಗಿ, ನಟರಾಗಿ, ಸಾಹಿತಿಯಾಗಿ ಸಲ್ಲಿಸಿದ ಅನುಪಮ ಸೇವೆಗಾಗಿ ಅನೇಕ ಪುರಸ್ಕಾರಗಳು ಅವರನ್ನು ಅರಸಿಕೊಂಡು ಬಂದವು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಪದ್ಮಶ್ರೀ (೧೯೭೪), ಪದ್ಮಭೂಷಣ (೧೯೯೨), ಕನ್ನಡ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (೧೯೯೨), ಸಾಹಿತ್ಯ ಅಕಾಡೆಮಿ ಪ್ರಶಸ್ತಿ (೧೯೯೪), ಜ್ಞಾನಪೀಠ ಪ್ರಶಸ್ತಿ (೧೯೯೮), ಕಾಳಿದಾಸ ಸನ್ಮಾನ್ (೧೯೯೮), ಕನ್ನಡ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್ (೧೯೯೪), ಯೂನಿವರ್ಸಿಟಿ ಆಫ್ ಸದರನ್ ಕ್ಯಾಲಿಫೋರ್ನಿಯಾದ ಗೌರವ ಡಾಕ್ಟರೇಟ್ (೨೦೧೧), ಕಾಡು, ಒಂದಾನೊಂದು ಕಾಲದಲ್ಲಿ, ವಂಶವೃಕ್ಷ ಚಲನಚಿತ್ರಗಳಿಗೆ ಉತ್ತಮ ನಿರ್ದೇಶನಕ್ಕಾಗಿ ಮೂರು ಸಲ ಫಿಲಂಫೇರ್ ಸೌತ್ ಪ್ರಶಸ್ತಿ, ಗುಬ್ಬಿವೀರಣ್ಣ ಪ್ರಶಸ್ತಿಗಳೂ ಸೇರಿದಂತೆ ಅನೇಕ ಪ್ರಶಸ್ತಿಗಳು ಅವರ ಮುಡಿಗೇರಿವೆ. ೨೦೧೪ರಲ್ಲಿ ಮೈಸೂರು ದಸರಾ ಮಹೋತ್ಸವವನ್ನು ಉದ್ಘಾಟಿಸಿದ ಗೌರವಕ್ಕೆ ಪಾತ್ರರಾಗಿದ್ದರು.

**ಸಾವಿನಲ್ಲಿಯೂ ಸರಳತೆ** : ಜೀವನದ ಕೊನೆಯವರೆಗೂ ಸರಳವಾಗಿ ಬದುಕಿದ್ದ ಡಾ. ಗಿರೀಶ್ ಕಾರ್ನಾಡ್ ಅವರು ತಮ್ಮ ಸಾವಿರ ನಂತರ ಸರಳವಾಗಿಯೇ ಈ ಲೋಕದಿಂದ ವಿದಾಯ ಹೇಳಬೇಕೆಂದು ತಮ್ಮ ಬಯಕೆಯನ್ನು ತಮ್ಮ ಕುಟುಂಬದವರಿಗೆ ತಿಳಿಸಿದ್ದರು. ಆಶಯದಂತೆ ಯಾವುದೇ ಸರ್ಕಾರಿ ಗೌರವವನ್ನು ಪಡೆಯದೆ, ಅಂತ್ಯಸಂಸ್ಕಾರದ ವಿಧಿ ವಿಧಾನಗಳನ್ನು ನಡೆಸದೆ ಅಂತ್ಯಸಂಸ್ಕಾರ ನೆರವೇರಿಸಲಾಯಿತು. ಅವರ ಅಂತಿಮ ದರ್ಶನಕ್ಕೆ ನಿರ್ಬಂಧ ಹೇರಿದ್ದರಿಂದ ಕುಟುಂಬದವರು, ಆಪ್ತರು, ಬಂಧುಗಳಿಗೆ, ಗಣ್ಯರಿಗೆ ಮಾತ್ರ ಅವಕಾಶ ನೀಡಲಾಗಿತ್ತು. ತಮ್ಮ ಹರಿತವಾದ ಮಾತುಗಳ ಮೂಲಕ ಹಲವರು ವಿವಾದಗಳಿಗೆ ಗುರಿಯಾಗಿದ್ದ ಡಾ. ಗಿರೀಶ್ ಕಾರ್ನಾಡ್ ಅವರು ೮೧ ವರ್ಷಗಳ ಬೇವು-ಬೆಲ್ಲವನ್ನು ಸವಿದು, ಜೂನ್ ೧೦ ರಂದು ಪಂಚಭೂತಗಳಲ್ಲಿ ಲೀನವಾದರು. ಅವರ ಆತ್ಮಕ್ಕೆ ಚಿರಶಾಂತಿಯನ್ನು, ಅವರ ಅಗಲಿಕೆಯ ನೋವನ್ನು ಭರಿಸುವ ಶಕ್ತಿಯನ್ನು ದಯಾಮಯನಾದ ಭಗವಂತ ಅವರ ಕುಟುಂಬದವರಿಗೆ ನೀಡಲಿ ಎಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.

– ಎಚ್.ಎಸ್.ಎಸ್

ಲೇಖನ

# ಗುರು ಮಹಿಮೆ

- ಆರ್.ಎಸ್. ಚಾಪಗಾವಿ *

**ಗುರುಬ್ರಹ್ಮಾ ಗುರುವಿಷ್ಣು ಗುರುದೇವೋ ಮಹೇಶ್ವರಾ ।**
**ಗುರು ಸಾಕ್ಷಾತ್ ಪರಬ್ರಹ್ಮ ತಸ್ಮೈಶ್ರೀ ಗುರುವೇ ನಮಃ ॥**

ಶ್ರೀಗುರುವೇ ಸೃಷ್ಟಿ ಸ್ಥಿತಿ ಲಯಕ್ಕೆ ಕಾರಣರಾದ ತ್ರಿಮೂರ್ತಿದೈವಂಗಳು. ಶ್ರೀಗುರುವೇ ಸಾಕ್ಷಾತ್ ಪರಬ್ರಹ್ಮನು ಎಂದು ಹೇಳಿ ಭಾರತೀಯ ತತ್ತ್ವಶಾಸ್ತ್ರದಲ್ಲಿ ಭಾರತೀಯ ಸಂಸ್ಕೃತಿಯಲ್ಲಿ ಶ್ರೀ ಗುರುವಿಗೆ ಪರಮೋಚ್ಚ ಸ್ಥಾನ ನೀಡಲಾಗಿದೆ. ಗುರುದೇವೋಭವ, ಗುರು ಸಾರ್ವಭೌಮ, ಹರನಿಂದಧಿಕ ಪರಮಗುರು, ಹರ ಮುನಿದರೂ ಗುರು ಕಾಯುವನು ಎಂದು ಶಾಸ್ತ್ರಗಳು ಹೇಳುತ್ತವೆ. 'ನಗುರೋರಧಿಕಂ' ಎಂದು ನಿಗಮಗಳು ಉಲಿಯುತ್ತಿವೆ. ಗುರು ಬೇರೆ, ಪರಬ್ರಹ್ಮ ಬೇರೆ ಎಂದು ಭಾವಿಸಕೂಡದು. ಜಗದ ಗುರು ಶಿವನಲ್ಲದೆ ಬೇರಿಲ್ಲ. ಪರಶಿವನೇ ಗುರುರೂಪಿಂದ ಸಂಜನಿಸಿ ಮರ್ತ್ಯರನ್ನು ಪೊರೆಯುತ್ತಾನೆ ಎಂದು ಶೃತಿಗಳು ಸಾರುತ್ತಿವೆ. ಗುರುವೇ ಪರಮನು, ಗುರುವೇ ಸರ್ವಜ್ಞನು, ಗುರುವೇ ಸಕಲ ಕಾರ್ಯಕಾರಣನು, ಗುರುವೇ ಸಾಕ್ಷಾತ್ ಪರಮಾತ್ಮನು. ಗುರು ಕಾರುಣ್ಯ ಪಡೆದಾತಂಗೆ ಮತ್ತೆ ಜನ್ಮಿಸಲುಂಟೆ? ಹೀಗೆ ಗುರು ಮಹಿಮೆಯನ್ನು ಸಾರಿ ಸಾರಿ ಹೇಳಲಾಗಿದೆ.

**'ಧ್ಯಾನಮೂಲಂ ಗುರುರ್ಮೂರ್ತಿ ಪೂಜಾಮೂಲಂ ಗುರೋರ್‌ಪದಂ**
**ಮಂತ್ರಮೂಲಂ ಗುರೋರ್ ವಾಕ್ಯಂ ಮುಕ್ತಿಮೂಲಂ ಗುರೋರ್ ಕೃಪಾ'**

ಗುರುವಿನ ಮೂರ್ತಿಯೇ ಧ್ಯಾನಕ್ಕೆ ಮೂಲವು. ಗುರು ಪಾದವೇ ಪೂಜೆಗೆ ಮೂಲವು. ಗುರುವಾಕ್ಯವೇ ಮಂತ್ರಕ್ಕೆ ಮೂಲವು. ಗುರು ಕೃಪೆಯೇ ಮುಕ್ತಿಗೆ ಮೂಲವು. ಹೀಗೆ ಗುರುವಿನ ಮಹತಿಯನ್ನು ಕೊಂಡಾಡಲಾಗಿದೆ. ಶಿವಪಥನರಿವೊಡೆ ಗುರುಪಥವೇ ಮೊದಲು ಎಂದು ಬಸವಣ್ಣನವರು ಹೇಳಿದ್ದಾರೆ. ಶ್ರೀಗುರು ವಚನುಪದೇಶವನಾಲಿಸಿದಾಗಳೆಹುದು ಮುಕುತಿ ಎಂದು ನಿಜಗುಣ ಶಿವಯೋಗಿಗಳು ಹೇಳಿದ್ದಾರೆ. ಗುರು ಸರಿಯಾದಿಲ್ಲ ಗುರುಪಾದವೆ ಮೂಜಗವೆಲ್ಲ ತಂಗಿ ನೀ ನಂಬವ್ವ ಈ ಮಾತು ಸುಳ್ಳಲ್ಲ ಎಂದು ಶಿಶುನಾಳ ಶರೀಫ್‌ರು ಹೇಳಿದ್ದಾರೆ. ಗುರುವೇ ಕಲ್ಪತರು ಹರನಿಂದಧಿಕ ಸದ್ಗುರು ಸತ್ಕ್ರಿಯೆಯಾಗರವು, ಸುಜ್ಞಾನ ಸಾಗರವು, ಗುರು ಒಲಿದು ಪಾದವನಿಟ್ಟ ನೆಲವೇ ಸುಕ್ಷೇತ್ರವು, ಗುರು ಮುಟ್ಟಿದ ಜಲವೇ ಪಾವನ ತೀರ್ಥವು, ಗುರುವಿನೊಲುಮೆಯಿದ್ದರೆ ಕೊರಡು ಕೊನರುವುದು ಎಂದು ಮೈಲಾರ ಬಸವಲಿಂಗ ಶರಣರು ಗುರು ಮಹಿಮೆಯನ್ನು ಬಹುಮನೋಜ್ಞವಾಗಿ ಹೇಳಿದ್ದಾರೆ. ಸೂರ್ಯನ ಸಾನಿಧ್ಯವಿಲ್ಲದಿದ್ದರೆ ಮೊಗ್ಗು ಅರಳುವುದಿಲ್ಲ. ಹಾಗೆಯೇ ಸಾಧಕನ ಹೃದಯ ಕಮಲವು ಅರಳಲು ಗುರು ಸಾನ್ನಿಧ್ಯ ಬೇಕೆಂದು ಪೂಜ್ಯ ಶ್ರೀ ಸಿದ್ಧೇಶ್ವರ ಸ್ವಾಮಿಗಳು ಹೇಳಿದ್ದಾರೆ. ಹೂವಿಗೂ ಸೂರ್ಯನಿಗೂ ಯಾವ ಸಂಬಂಧವಿದೆಯೋ ಅದೇ ಸಂಬಂಧ ನನಗೂ ನನ್ನ ಗುರುವಿಗೂ ಇದೆ ಎಂದು ಪಾಶ್ಚಾತ್ಯ ಕವಿ ಟೆನಿಸನ್ ಗುರು ಶಿಷ್ಯ ಸಂಬಂಧ ಕುರಿತು ಹೇಳಿದ್ದಾನೆ. ಗುರುವಿಲ್ಲದ ಮಠವು ನೀರಿಲ್ಲದ ಕೆರೆಯಂತೆ, ಪರಿಮಳವಿಲ್ಲದ ಪುಷ್ಪದಂತೆ ಬರಡಾಗುತ್ತದೆ. ಗುರು ಮಹಿಮೆ ಮಹತ್ತರವಾದುದು. ಪ್ರಪಂಚದ ಎಲ್ಲ ಧರ್ಮಗಳಲ್ಲೂ ಗುರುವಿಗೆ ಅತ್ಯುಚ್ಚ ಸ್ಥಾನವಿದೆ.

**ಗುರು ಯಾರು ?** 'ಗು' ಅದರೆ ಅಜ್ಞಾನ, 'ರು' ಅಂದರೆ ನಿವಾರಣ, ಅಜ್ಞಾನವನ್ನು ನಿವಾರಣೆ ಮಾಡಿ ಸುಜ್ಞಾನ ನೀಡುವವನೇ ಗುರು. ಅಜ್ಞಾನವೆಂಬ ಕತ್ತಲೆ ಕಳೆದು ಜ್ಞಾನದ ಬೆಳಕು ನೀಡುವವನೆ ಗುರು. ಗುರುವೆಂಬುದು ಸ್ವಯಂ ಜ್ಯೋತಿಪ್ರಕಾಶವು. ಎಂದು ಚೆನ್ನಬಸವಣ್ಣನವರು ಹೇಳಿದ್ದಾರೆ. ಅನ್ನ ಅರಿವೆ ಆಶ್ರಯ ಆರೋಗ್ಯ ಇವು ಮನುಷ್ಯನ ಮೂಲಭೂತ ಅವಶ್ಯಕತೆಗಳು. ಇವುಗಳನ್ನು ಅನುಭೋಗಿಸಲು ಅರಿವು ನೀಡುವಾತನೆ ಗುರು, 'ಅರಿವೇ ಗುರು' ಎಂದು ಬಸವಣ್ಣನವರು ಹೇಳಿದ್ದಾರೆ. ಆಕಸ್ಮಿಕವಾಗಿ ಪ್ರಾಪ್ತವಾದ ಈ ನರಜನ್ಮವು ಎಲ್ಲ ಜೀವಿಗಳಲ್ಲಿ ಶ್ರೇಷ್ಠವಾದುದು. ನರಜನ್ಮದ ಗುರಿ ಅರಿವು ಪಡೆವುದಾಗಿದೆ. ಅರಿವು ಪಡೆದು ಆರೂಢನಾಗುವದು, ಇದಕ್ಕೆ ದಾರಿ ತೋರಲು ಗುರುಬೇಕು. 'ವಿದ್ಯಾವಿಹೀನ ಪಶುಃ' ಅಂದರೆ ವಿದ್ಯೆ ಇಲ್ಲದವನು ಪಶುವಿಗೆ ಸಮಾನ ಎಂದು ಹೇಳಲಾಗಿದೆ. 'ವಿದ್ಯೆಯುಳ್ಳನ ಮುಖವು ಮುದ್ದು ಬರುವಂತಿತ್ತು, ವಿದ್ಯೆ ಇಲ್ಲದವನ ಬರಿ ಮುಖವು ಹಾಳೂರ ಹದ್ದಿನಂತಿತ್ತು ಸರ್ವಜ್ಞ' ಎಂದು ಸರ್ವಜ್ಞ ಕವಿ ಹೇಳಿದ್ದಾನೆ. ವಿದ್ಯೆಯೇ ಮನುಷ್ಯನಿಗೆ ಭೂಷಣವು. ಮಾನವನ ಪ್ರಗತಿಗೆ ಏಳ್ಗೆಗೆ ಆತ್ಮೋದ್ಧಾರಕ್ಕೆ ವಿದ್ಯೆ ಬೇಕೇಬೇಕು. ಆ ವಿದ್ಯೆ ನೀಡುವವನೇ ಗುರು. ಉಚ್ಚ, ನೀಚ ಬಡವ ಬಲ್ಲಿದ ಎಂದೆನ್ನದೆ ಜಗವೆಲ್ಲವನೊಂದಯಾಗಿ ಬೆಳಗುವ ಸೂರ್ಯನಂತೆ ಜ್ಞಾನ ಸೂರ್ಯನ ಗುರುವು ಬಯಸಿ ಬಂದವರನೆಲ್ಲರನ್ನು ತನ್ನ ಕಾರುಣ್ಯದಿಂದ ಉದ್ಧರಿಸುತ್ತಾನೆ.

* ೬೪೪, ರಾಮತೀರ್ಥನಗರ, ಬೆಳಗಾವಿ-೧೬



ಪ್ರಾಚೀನ ಕಾಲದಲ್ಲಿ ನಮ್ಮ ದೇಶದಲ್ಲಿ ಗುರುಕುಲ ಪದ್ಧತಿಯೂ ಜಾರಿಯಲ್ಲಿತ್ತು. ಆಗಿನ ಗುರುಗಳಾದವರು ಸಂಸಾರದ ತಾಪತ್ರಯಗಳಿಂದ ದೂರ ಉಳಿದು ಅರಣ್ಯಗಳಲ್ಲಿ ಆಶ್ರಮ ಕಟ್ಟಿಕೊಂಡು ಇದ್ದು ಆಧ್ಯಾತ್ಮ ಸಾಧನೆಗೆ ತೊಡಗುತ್ತಿದ್ದರು. ಅವರು ತಪೋನಿಷ್ಠರೂ ನೈಷ್ಠಿಕ ಬ್ರಹ್ಮಚಾರಿಗಳೂ ಶಾಸ್ತ್ರಗಳಲ್ಲಿ ಬಲ್ಲಿದರೂ ಆಗಿರುತ್ತಿದ್ದರು. ಆದರ್ಶ ಸಿದ್ಧಾಂತಗಳಿಗೆ ಅನುಗುಣವಾಗಿ ಜೀವನ ನಡೆಸುತ್ತಿದ್ದರು. ಆತ್ಮಜ್ಞಾನ, ಆತ್ಮಸಿದ್ಧಿ ಸಾಧಿಸಿರುತ್ತಿದ್ದರು. ವಿದ್ಯಾಕಾಂಕ್ಷಿಗಳು, ಸಾಧಕರು ಗುರುಕುಲಕ್ಕೆ ಹೋಗಿ ಗುರುಗಳಿಗೆ ಶರಣಾಗಿ ತಮ್ಮ ತನು ಮನ ಧನಗಳನ್ನು ಗುರುವಿಂಗೆ ಅರ್ಪಿಸಿ ಅವರ ಸೇವೆ ಮನಮುಟ್ಟಿ ಮಾಡಿ ಅವರ ಕರುಣೆಗೆ ಪಾತ್ರರಾಗಿ ವಿದ್ಯೆಯನ್ನು ಜ್ಞಾನವನ್ನು ಸಂಪಾದಿಸುತ್ತಿದ್ದರು. ಆ ನಿಸರ್ಗದ ಶಾಂತ ಪರಿಸರದಲ್ಲಿ ಎಲ್ಲ ಪ್ರಾಣಿ ಪಕ್ಷಿಗಳು ಸಹಬಾಳ್ವೆಯಿಂದ ಇರುತ್ತಿದ್ದವು. ಶ್ರೀರಾಮ ಹಾಗೂ ಶ್ರೀಕೃಷ್ಣರು ಅಂಥ ಗುರುಕುಲಗಳಲ್ಲಿ ಇದ್ದು ಓದುತ್ತಿದ್ದರು. ಶ್ರೀರಾಮನಿಗೆ ವಶಿಷ್ಠರೂ, ಕೃಷ್ಣನಿಗೆ ಸಾಂದೀಪನಿಯವರೂ ಗುರುಗಳಾಗಿದ್ದರು. ಸ್ವಾಮಿ ವಿವೇಕಾನಂದರವರಿಗೆ ರಾಮಕೃಷ್ಣ ಪರಮಹಂಸರು ಗುರುಗಳಾಗಿದ್ದರು. ಆದರೆ ಈಗಿನ ಶಿಕ್ಷಣ ಪದ್ಧತಿ ಗುರು ಶಿಷ್ಯ ಸಂಬಂಧವು ತೀರ ವಿಭಿನ್ನವಾಗಿರುವುದು. ಕುಲಗೋತ್ರವನ್ನದೆ ಅರ್ಹತೆಯುಳ್ಳ ಯಾವ ವ್ಯಕ್ತಿಯಾದರೂ ಗುರುವಾಗಬಹುದು. ಊರಿಂಗೆ ದಾರಿಯನು ಆರು ತೋರಿದಡೇನು ಸಾರಾಯದ ನಿಜವ ತೋರುವ ಗುರು ಯಾರಾದಡೇನು? ಜಗತ್ತಿನ ಯಾವುದೊಂದು ವಸ್ತುವೂ ಗುರುವಾಗಬಲ್ಲದು. ಅವುಗಳಿಂದ ನಾವು ಏನಾದರೂ ಕಲಿತುಕೊಳ್ಳುವಂತಿದ್ದರೆ ಅವುಗಳೇ ನಮ್ಮ ಗುರುವು. ನಿಸರ್ಗವು ನಮ್ಮ ಶ್ರೇಷ್ಠ ಗುರು ಎಂದೂ ಸ್ವಾಮಿ ವಿವೇಕಾನಂದರು ಹೇಳಿದ್ದಾರೆ.

**ಗುರು ಬೋಧೆ:** ಗುರುಬೋಧೆ ಅಂದರೆ ಜ್ಞಾನ ಬೋಧನೆಯೇ ಆಗಿದೆ. 'ನಹಿ ಜ್ಞಾನೇನ ಸದೃಶಂ' ಜ್ಞಾನಕ್ಕೆ ಸರಿ ಯಾವುದೂ ಇಲ್ಲ. ಅಂಥಜ್ಞಾನ ನೀಡುವವನೇ ಗುರು. ಶಿಷ್ಯನೂ ತನ್ನಂತೆ ಜ್ಞಾನಿಯಾಗಬೇಕು. ತನ್ನನ್ನು ಮೀರಿ ಬೆಳೆಯಬೇಕು ಎಂಬುದೇ ಗುರುವಿನ ಹೇತುವಾಗಿರುವದು. ಸೂರ್ಯಚಂದ್ರರು ಹೊರಗಿನ ಕತ್ತಲೆ ಕಳೆದು ಬೆಳಕು ನೀಡಬಲ್ಲವರಾದರೆ ಗುರುವು ಶಿಷ್ಯನ ಅಜ್ಞಾನವೆಂಬ ಅಂತರಂಗದ ಕತ್ತಲೆಯನ್ನು ಕಳೆದು ಸುಜ್ಞಾನವೆಂಬ ಬೆಳಕು ನೀಡುತ್ತಾನೆ. ಗುರುವು ಶಿಷ್ಯನನ್ನು ತನ್ನಂತೆಯೇ ಮಾಡಿಕೊಂಡು ತನ್ನಲ್ಲಿ ಒಂದಾಗಿಸಿಕೊಳ್ಳುತ್ತಾನೆಂದು ತತ್ವವೇತ್ತರು ಹೇಳಿದ್ದಾರೆ. ಗುರುಬೋಧೆಯೆಂಬ ಪರಮಾಮೃತವನೀಂಟಿ ಪರಿಪೂರ್ಣ ತೃಪ್ತಿ ಹೊಂದಿದ ಶಿಷ್ಯನು ಗುರುಪದದೊಳೈಕ್ಯಗೊಳ್ಳುವನೆಂದು ಕವಿ ವಿರತ ಮಹಲಿಂಗದೇವ ಹೇಳಿದ್ದಾನೆ.

**ಚಿತ್ತರಂಗದಲ್ಲಿ ಬೆಳೆವ ಗುರುಬೋಧೆಯನು**
**ನಿತ್ಯ ಕೇಳುವಂಗೆ ಭವ ಬಂಧನದ ಭಯವಿಲ್ಲ**
**ತಾಳಮತಿಗಳು ಕೂಡಿ ಹೇಳುವ ಕತೆಯಲ್ಲ**
**ವಿಷಯಂಗಳೊಳು ಮುಳುಗಿ ಹಸೆಗೆಡಿಸುವ ಕತೆಯಲ್ಲ'**

ಗುರುಬೋಧೆಯದು ಭವಬಂಧನ ಕಳೆವ ಜ್ಞಾನನಿಧಿಯು, ಅಂತರಂಗದ ಚಿತ್ಕಳೆಯನ್ನು ಭಾವದಿಂದ ಮನಕ್ಕೆ ತಂದು ಮನದಿಂದ ಕರಸ್ಥಲಕ್ಕೆ ತಂದು ಇಷ್ಟಲಿಂಗವನ್ನು ಅನುಗ್ರಹಿಸಿ ಅಂಗಾಂಗ ಸಾಮರಸ್ಯವನ್ನು ಬೋಧಿಸುವನು. ಅಜ್ಞಾನದ ಆಮಿರವ ತೊಡೆದು ಸುಜ್ಞಾನದ ಬೆಳಕಿನತ್ತ ಕರದೊಯ್ಯುವನು. ಎನ್ನಪರತತ್ವರ ನಿಜವೇ ನೀನಹೆ ನನ್ನಿಂದಧಿಕ ಸಂಪನ್ನನಾಗೆಂದು ತನ್ನಂತೆ ಮಾಡಿಕೊಳ್ಳುವವನೇ ನಿಜವಾದ ಗುರು. ಅಲ್ಲಿ ಗುರು ಶಿಷ್ಯ ಎಂಬ ಭೇದವು ಇರಲಾರದು.

**ಶರಣರ ದೃಷ್ಟಿಯಲ್ಲಿ ಗುರು:** ಬಸವ ಕಾಲೀನ ಮತ್ತು ಬಸವೋತ್ತರ ಕಾಲದ ಶರಣರೆಲ್ಲರು ಗುರುವಿನ ಮಹತ್ವವನ್ನು ಭವಬಂಧನದಿಂದ ಬಿಡುಗಡೆ ಹೊಂದಲು ಗುರುವಿನ ಅವಶ್ಯಕತೆಯನ್ನು ಅತ್ಯಂತ ಸ್ವಾರಸ್ಯಕರವಾಗಿ ಹೇಳಿದ್ದಾರೆ.

'ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೆ ಭವಬಂಧನ ಬಿಡಿಸಿ ಪರಮಸುಖವ ತೋರಿದ ಗುರುವೆಭವಿ ಎಂಬುದು ಕಳೆದು ಭಕ್ತಿ ಎಂದೆನಿಸಿದ ಗುರುವೆ ಚೆನ್ನಮಲ್ಲಿಕಾರ್ಜುನನ ತಂದೆನ್ನ ಕೈವಶಕ್ಕೆ ಕೊಟ್ಟ ಗುರುವೆ ನಿನಗೆ ಶರಣು ಶರಣಾರ್ಥಿ'

ಗುರುವಿನಿಂದ ಭವಪಾಶ ಹರಿವುದು ಎನ್ನ ಭವಬಂಧನ ಕಳೆದು ಎನ್ನ ನರಜನ್ಮವ ತೊಡೆದು ಎನಗೆ

ಹರಜನ್ಮವ ನೀಡಿದ ಗುರುವಿಗೆ ಶರಣು ಬಂದಿದ್ದೇನೆಂದು ಅಕ್ಕಮಹಾದೇವಿ ಹೇಳುತ್ತಾಳೆ. ಎನ್ನೊಡೆಯ ಚೆನ್ನಮಲ್ಲಿಕಾರ್ಜುನನನ್ನು ತಂದು ಕರಸ್ಥಳಕ್ಕೆ ನೀಡಿದನೆಂದು ಅಕ್ಕ ಹೇಳಿರುವುದು ಸ್ವಾರಸ್ಯಕರವಾಗಿದೆ.

**'ಉರಿವ ಕೆಂಡದ ಮೇಲೆ ತೃಣವ ತಂದಿರಿಸಿದಡೆ**
**ಆ ತೃಣವನ್ನು ಆ ಕೆಂಡ ನುಂಗುವಂತೆ**
**ಗುರುಚರಣದ ಮೇಲೆ ತನು ತೃಣವನಿರಿಸಿದಡೆ**
**ಆ ತನುವೆಲ್ಲಾ ಲಿಂಗಮಯ ಕಾಣಾ ರಾಮನಾಥ.'**

ಉರಿವ ಕೆಂಡ ಮತ್ತು ತೃಣದ ದೃಷ್ಟಾಂತದೊಂದಿಗೆ ಗುರು ಶಿಷ್ಯನ ಭವಬಂಧನ ಬಿಡಿಸುವ ಪರಿಯನ್ನು ಜೇಡರ ದಾಸಿಮಯ್ಯ ವಿವರಿಸಿದ್ದಾನೆ.

**'ಕಂಡುದ ಹಿಡಿಯಲೊಲ್ಲದೆ ಕಾಣದುದನರಸಿ**
**ಹಿಡಿದಿಹೆನೆಂದಡೆ**
**ಸಿಕ್ಕದೆಂಬ ಬಳಲಿಕೆಯ ನೋಡಾ**
**ಕಂಡುದನೆ ಕಂಡು ಗುರು ಪಾದವಿಡಿದಲ್ಲಿ**
**ಕಾಣದುದ ಕಾಣಬಹುದು ಗುಹೇಶ್ವರಾ.'**

ಸಾಕಾರ ರೂಪನಾದ ಗುರುವಿಂಗೆ ಶರಣಾಗಿ ತನ್ನನ್ನು ಅರ್ಪಿಸಿಕೊಂಡರೆ ನಿರಾಕಾರ ನಿರ್ಗುಣ ನಿರಂಜನ ಸ್ವರೂಪಿಯಾದ ದೇವನನ್ನು ಕಾಣಬಹುದೆಂದು ಪ್ರಭುದೇವರು ಹೇಳಿದ್ದಾರೆ.

**'ಧ್ಯಾನಕ್ಕೆ ನಿಮ್ಮ ಶ್ರೀಮೂರ್ತಿಯೆ ಮುಖ್ಯವಯ್ಯಾ**
**ಪೂಜೆಗೆ ನಿಮ್ಮ ಶ್ರೀಪಾದವೆ ಮುಖ್ಯವಯ್ಯಾ**
**ಮಂತ್ರಕ್ಕೆ ನಿಮ್ಮ ನಾಮಾಮೃತವೆ ಮುಖ್ಯವಯ್ಯಾ**
**ಮುಕ್ತಿಗೆ ನಿಮ್ಮ ಘನಕೃಪೆಯೆ ಮುಖ್ಯವಯ್ಯಾ**
**ನಿಮ್ಮಂದಧಿಕರನಾರನೂ ಕಾಣೆನಯ್ಯ**
**ಕೂಡಲಸಂಗಮದೇವಾ ನೀವು ಜ್ಞಾನ ಗುರುವಾದ**
**ಕಾರಣ?**

ಕೂಡಲ ಸಂಗಮನನ್ನೇ ಜ್ಞಾನಗುರುವಾಗಿಸಿಕೊಂಡ ಬಸವಣ್ಣನವರು ಎಲ್ಲದಕ್ಕೂ ಮುಖ್ಯವಾಗಿ ಗುರುಕೃಪೆ ಬೇಕೆಂದು ಹೇಳುತ್ತಾರೆ.

**'ಗುರುವೆ ಪರತತ್ವವು ನೋಡಾ,**
**ಗುರುವೆ ಪರವಸ್ತುವು ನೋಡಾ**
**ಗುರುವೆ ಪರಮಬ್ರಹ್ಮವು ನೋಡಾ,**
**ಗುರುವೆ ಪರಶಿವನುನೋಡಾ**
**ಗುರುವಿನಿಂದ ಪರವಿಲ್ಲೆಂದು ಸಕಲ ಶೃತಿಗಳು**
**ಹೊಗಳುತಿಪ್ಪವು**
**ಇಂತಪ್ಪ ಗುರುವಿಂಗೆ ನಮೋನಮೋ ಎಂಬೆನಯ್ಯಾ**
**ಅಖಂಡೇಶ್ವರಾ'**

ಗುರುವೆ ಪರತತ್ವವು, ಗುರುವೆ ಪರವಸ್ತುವು, ಗುರುವೆ ಪರಬ್ರಹ್ಮನು, ಪರಶಿವನು ಗುರುವಿನಂದಧಿಕ ರಾರೂ ಇಲ್ಲ. ಅಂತಪ್ಪ ಗುರುವಿಂಗೆ ನಾನು ಶರಣು ಹೊಕ್ಕೆನೆಂದು ಷಣ್ಮುಖ ಶಿವಯೋಗಿಗಳು ಹೇಳಿದ್ದಾರೆ. ಗುರುವೆ ಇಹಪರ ಗುರುವೆ ನಿನ್ನಂತೆ ಮಾಡಿದ ಗುರುವೆ, ಕಪಿಲಸಿದ್ಧ ಮಲ್ಲಿನಾಥ ನಿನ್ನ ಕರುಣದಿಂದ ಪರಮ ಪದವ ಕಂಡೆನು' ಎಂದು ಶಿವಯೋಗಿ ಸಿದ್ಧರಾಮ ಹೇಳಿದರೆ, ಗುರು ವಚನದಿಂದಲ್ಲದೆ ಲಿಂಗವನರಿಯಬಾರದು, ಗುರುವಚನದಿಂದಲ್ಲದೆ ತನ್ನ ತಾನರಿಯಬಾರದು' ಎಂದು ಮುಕ್ತಾಯಕ್ಕ ಹೇಳಿರುವುದನ್ನು ಕಾಣಬಹುದು. ಗುರುಕರುಣ ಚರಣಸೇವೆ ಭವದ ಬೀಜವನತಿಗಳೆಯಿತ್ತು' ಎಂದು ಹಾವಿನಹಾಳ ಕಲ್ಲಯ್ಯ ಹೇಳಿರುವನು. ಗುರೂಪದೇಶವ ಕೇಳದವನೆ ನರಕಿ' ಎಂದಿದ್ದಾನೆ. ವೀರಶರಣ ಮಡಿವಾಳ ಮಾಚಿದೇವಯ್ಯ 'ಗುರುವೆ ನೀ ನುಡಿದ ನುಡಿ ಪರಲೋಕದಿರವೆನಗೆ, ಗುರುವೆ ನಿಮ್ಮಡಿಯ ಕೃಪೆಯ ಪಡೆದ ಮೇಲೆ ಪರದ ಗೊಡವೆ ಎನಗೇಕೆ? ಎಂದು ಕೇಳಿರುವ ವಿರತ ಮಹಲಿಂಗ ದೇವನು ಗುರುಕೃಪೆ ಪಡೆದ ನಗೆ ಪರಲೋಕದ ಚಿಂತೆಯೇ ಇಲ್ಲವೆಂದು ಹೇಳಿದ್ದಾನೆ.

**ಪಾಪದಾ ಸಂಸಾರ ಕೂಪದಲಿ ಬಿದ್ದವರು**
**ಪಾಪ ಪರಿಹರಿದು ಪೊರಮಡಲು**
**ಗುರುಪಾದವೇ ಸೋಪಾನ ಸರ್ವಜ್ಞ**
**ಎತ್ತಾಗು ತೊತ್ತಾಗು ಹಿತ್ತಲದ ಗಿಡವಾಗು**
**ಮತ್ತೆ ಗುರುವಿನ ಪಾದದ ಕರುವಾಗಿ**
**ಗುರುವಿನ ಹತ್ತಲಿರು ಸರ್ವಜ್ಞ**

ಈ ಭವಸಾಗರ ಸಂಸಾರ ಕೂಪದಿಂದ ಮೇಲೆದ್ದು ಬರಲು ಗುರುವಿನ ಪಾದಗಳೇ ಸೋಪಾನಗಳು, ಅಂತಪ್ಪ ಗುರುವಿನ ತೊತ್ತಾಗಿ ಗುರುವಿನ ಪಾದದ ಹತ್ತಲಿರು. ಅಂದರೆ ಗುರುವು ನಿನ್ನನ್ನು ಭವಬಂಧನದಿಂದ ಬಿಡುಗಡೆಗೊಳಿಸುವನೆಂದು ಸರ್ವಜ್ಞಕವಿ ಹೇಳಿದ್ದಾನೆ.

ಈ ಪ್ರಕಾರ ಶರಣರು ಸಂತರು ಮಹಂತರು, ವಿದ್ವಾಂಸರುಗಳೆಲ್ಲ ಗುರುವಿನ ಮಹಿಮೆಯನ್ನು ಮನಸಾರೆ ಸಾರಿ ಸಾರಿ ಹೇಳಿದ್ದಾರೆ. ಅಂಥ ಗುರುವಿಗೆ ನತಮಸ್ತಕರಾಗಿ ಶರಣೆಂದು ಈ ಭವಬಂಧನದ ಪಾಶವನ್ನು ಹರಿದೊಗೆದು ಮುಕ್ತರಾಗಬೇಕೆಂದು ತಿಳಿಸಿದ್ದಾರೆ. ■



**ಚಿಂತನೆ**

# "ಜ್ಞಾನದ ಬೆಳಕು – ದೀಪದ ಬೆಳಕು"

– ರಾಜಾಶಂಕರ್ .ವಿ

**ಬೆಳಕ ನೀಡಲು ಹಾತೊರೆದಿದೆ ಹಣತೆ**
**ಮಣ್ಣಿನಿಂದ ಹಣತೆ ಮಾಡಿದವರಾರೋ?**
**ಬೀಜದಿಂದ ಎಣ್ಣೆ ತೆಗೆದವರಾರೋ?**
**ಹತ್ತಿಯಿಂದ ಬತ್ತಿ ತೀಡಿದವರಾರೋ?**

ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರಿಸಲು ಹೋದಂತೆ ವಿಸ್ತಾರವಾದ ಒಳನೋಟ ನಮ್ಮ ಕಣ್ಣಮುಂದೆ ಹಾದುಹೋಗುತ್ತದೆ.

"ಮಣ್ಣಿನಿಂದ ಮಾಡಿದ ಹಣತೆ, ಬೀಜದಿಂದ ತೆಗೆದ ಎಣ್ಣೆ, ಹತ್ತಿಯಿಂದ ಮಾಡಿದ ಬತ್ತಿ" ಒಂದಕ್ಕೊಂದು ಸಂಬಂಧವಿಲ್ಲ, ಆದರೆ ಒಂದಕ್ಕೊಂದು ಪೂರಕ. ಆದರೆ ಬತ್ತಿಗೆ ಬೆಂಕಿ ತಗುಲಿ ಬೆಳಕು ನೀಡಲು ಉರಿಯಿತು ದೀಪ. ಹೊಗಳಿಕೆಗೆ ಆಸೆ ಪಡೆದ ಯಾರಿಗೂ ತನ್ನ ನೋವನ್ನು ತಿಳಿಸದೆ ಪರರಿಗಾಗಿ ಮಿಡಿಯುವಂತೆ ಹಾಗೆಯೇ ಉರಿದು ಬೆಳಕ ನೀಡುವ ಹಣತೆ ಯಾರಿಗೂ ಸರಿಸಾಟಿಯಲ್ಲ. ಯಾರಿಗೂ ಕಾಣಿಸದ ದೀಪ ಬೆಳಗಲು ಸಹಕಾರಿಯಾಗುವ ಎಣ್ಣೆಯ ನಿಸ್ವಾರ್ಥ ಸೇವೆ ಬೆಲೆ ಕಟ್ಟಲಾಗದು. ದೀಪ ಆಶ್ರಯ ನೀಡಿದ ಹಣತೆ ನಾನೇ ಎಂದು ಯಾರಿಗೂ ಹೇಳುವುದಿಲ್ಲ. ಅದೇ ರೀತಿಯಲ್ಲಿ ತಮ್ಮ ಶ್ರಮದ ಮೂಲಕ ಮತ್ತೊಬ್ಬರ ಖ್ಯಾತಿಗೆ ಕಾರಣವಾದರು ಅದೆಷ್ಟೋ ಜನ. ಅಂತೆಯೇ ದೀಪ ನೀಡಿದ ಬೆಳಕು ಕೂಡ ನಿಸ್ವಾರ್ಥದಿಂದ ಉರಿದಿದೆ ಎಂಬುದು ಕಟುಸತ್ಯ. ದೀಪದ ನೆರಳಲ್ಲೇ ನಡೆದಿದೆ ಅದೆಷ್ಟೋ ಕರುಳು ಮಿಡಿಯುವ ದುರಂತದ ಕಥೆಗಳು. ದೀಪ ಕತ್ತಲೆಯನ್ನು ಓಡಿಸಿದಂತೆ ನಮ್ಮೊಳಗಿನ ಕತ್ತಲೆಯನ್ನು ಅರಿವಿನ ಜ್ಯೋತಿ ಓಡಿಸಬೇಕು. ಆಗ ದಾನವನಾಗಿದ್ದ ಮನುಷ್ಯ ಸುಸಂಸ್ಕೃತ ವ್ಯಕ್ತಿಯಾಗಿ ರೂಪುಗಳ್ಳುತ್ತಾನೆ.

ಮನಸ್ಸನ ಆವರಿಸಿರುವ ಅಂಧಕಾರ, ಮೂಢನಂಬಿಕೆ, ಅಜ್ಞಾನ ಇವುಗಳಿಂದ ಮುಕ್ತಿ ದೊರೆಯಲು, ಕಲ್ಲು ಮುಳ್ಳುಗಳಿಲ್ಲದ ದಾರಿಯಲ್ಲಿ ನಡೆಯುವಂತಾಗಲು ಅರಿವಿನ ಜ್ಯೋತಿ ನಮ್ಮೊಳಗೆ ಸದಾ ಪ್ರಕಾಶಮಾನವಾಗಿ ಬೆಳಗುವಂತಿರಬೇಕು. ಈ ಶತಮಾನದಲ್ಲಿ ಸಮಾಜಕ್ಕೆ ಬೆಳಕು ನೀಡಿ ಸುಂದರವಾದ ಭವಿಷ್ಯವನ್ನು ರೂಪಿಸಿಕೊಳ್ಳುವಂತಾಗಲು ಮಾಡಿದವರು ನಡೆದಾಡುವ ದೇವರು, ನಮ್ಮೆಲ್ಲರ ಆರಾಧ್ಯದೈವ, ತ್ರಿವಿಧ ದಾಸೋಹಿ, ಪದ್ಮಭೂಷಣ, ಕರ್ನಾಟಕ ರತ್ನ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳೆಂದು ಹೇಳಲು ಅಭಿಮಾನವೆನಿಸುತ್ತದೆ, ಧನ್ಯತಾಭಾವನೆ ಮೂಡುತ್ತದೆ.

ಗುರಿ ನಿಶ್ಚಲವಾಗಿರಬೇಕು. ಮಾಡುವ ನಮ್ಮ ಕಾರ್ಯ ಪರಿಶುದ್ಧವಾಗಿರಬೇಕು. ಆಗ ಯಶಸ್ಸು ನಮ್ಮದಾಗುತ್ತದೆ. ಅದೇ ರೀತಿ ನಾವು ಏಕಾಗ್ರತೆಯಿಂದ ಮನಸ್ಸನ್ನು ಬಿಗಿ ಹಿಡಿದು ಯೋಗ್ಯವಾದ ಗುರುವಿನ ಮಾರ್ಗದರ್ಶನ ದೊರಕುವಂತೆ ಮಾಡು ಎಂದು ಶಿವನಲ್ಲಿ ಪ್ರಾರ್ಥಿಸಿಕೊಳ್ಳಬೇಕು. ಆಗ ನಾವು ಸಿದ್ಧಿ ಪಡೆಯುತ್ತೇವೆ. ದೀಪದಂತೆ ಬೆಳಕು ನೀಡಿ ಪ್ರತಿಫಲ ಅಪೇಕ್ಷೆಯಿಲ್ಲದೆ ನಡೆದಾಗ ಶಿವ ಮೆಚ್ಚಿ ಫಲ ನೀಡುತ್ತಾನೆ.

ನಂ. ೪೩೭, ೧೩ನೇ ಕ್ರಾಸ್, ೩೧ನೇ ಮುಖ್ಯರಸ್ತೆ, 'ಡಿ' ಗ್ರೂಪ್ ಬಡಾವಣೆ, ಬೆಂಗಳೂರು-೯೧

## ದಾನಿಗಳ ಪಟ್ಟಿ

ಶ್ರೀ ಸಿದ್ಧಗಂಗಾ ಮಠ, ತುಮಕೂರು

**ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ**

**ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.**

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೨೭೦೧. | ಶ್ರೀ ಬಿ.ಎನ್. ಪುರವಣೆ<br>ಚಳ್ಳಕೆರೆ | ೧೪,೦೦೦ |
| ೨೭೦೨. | ಶ್ರೀ ಮಾನಸ ಎಸ್. ದೇಸಾಯಿ<br>ಕ್ಯಾತಸಂದ್ರ | ೩,೦೦೦ |
| ೨೭೦೩. | ಶ್ರೀ ಟಿ.ಕೆ. ತಿಪ್ಪರಾವ್<br>ಚಳ್ಳಕೆರೆ | ೪೫,೦೦೦ |
| ೨೭೦೪. | ಡಾ॥ ಭಾನುಶ್ರೀ<br>ಬೆಂಗಳೂರು | ೧,೧೬೦ |
| ೨೭೦೫. | ಶ್ರೀ ಮಹಮದ್ ವಾಝಿದ್<br>ಕ್ಯಾತಸಂದ್ರ | ೨೦,೦೦೦ |
| ೨೭೦೬. | ಶ್ರೀ ಕೆ.ವಿ. ಮಹೇಶ್‌ಕುಮಾರ್<br>ತುಮಕೂರು | ೨೦,೦೦೦ |
| ೨೭೦೭. | ಶ್ರೀ ಸಂಗಶೆಟ್ಟಿ<br>ಬೆಂಗಳೂರು | ೨೦,೦೦೦ |
| ೨೭೦೮. | ಶ್ರೀ ಪಿ.ಕೆ. ನಾಗರಾಜು<br>ಬೆಂಗಳೂರು | ೧೪,೦೦೦ |
| ೨೭೦೯. | ಶ್ರೀ ನಂದಿನಿ ಬಿ. ಪ್ರಕಾಶ್<br>ಬೆಂಗಳೂರು | ೧,೦೦೦ |
| ೨೭೧೦. | ಶ್ರೀ ಹೆಚ್.ಎಸ್. ಕುಮಾರಪ್ಪ<br>ಹಿರೇನಲ್ಲೂರ್ | ೧,೦೦೦ |
| ೨೭೧೧. | ಶ್ರೀ ಹೆಚ್.ಪಿ. ಮಲ್ಲಿಕಾರ್ಜುನ<br>ತರೀಕೆರೆ | ೧,೦೦೦ |
| ೨೭೧೨. | ಶ್ರೀ ಎ. ಸಿದ್ಧಪ್ಪ<br>ಹಾಲೇನಹಳ್ಳಿ, ಸಿರಾ ತಾ., | ೧,೦೦೦ |
| ೨೭೧೩. | ಶ್ರೀ ಸಿ.ಬಿ. ಹೇಮಣ್ಣ<br>ಬೆಂಗಳೂರು | ೧,೦೦೦ |
| ೨೭೧೪. | ಶ್ರೀ ಎನ್.ಎಂ. ಪುಷ್ಪಕಲಾ<br>ಹೊನ್ನೇನಹಳ್ಳಿ | ೨,೦೦೦ |
| ೨೭೧೫. | ಶ್ರೀ ಜಿ. ಗುರುಬಸಪ್ಪ<br>ಸೋಗಿಲು | ೧,೦೦೦ |
| ೨೭೧೬. | ಶ್ರೀ ಎಸ್.ಹೆಚ್. ಗಿರೀಶ<br>ಸೋಗಿಲು | ೫೦೦ |
| ೨೭೧೭. | ಶ್ರೀ ಟಿ.ಎಂ. ಮಲ್ಲೇಶಯ್ಯ<br>ಮೈಸೂರು | ೨,೦೦೧ |
| ೨೭೧೮. | ಶ್ರೀ ಹೊನ್ನಗಂಗಯ್ಯ<br>ರೇವಣ್ಣನಪಾಳ್ಯ | ೧,೦೦೦ |
| ೨೭೧೯. | ಶ್ರೀ ಜಿ. ನಾಗೇಶ<br>ಸೋಲೂರು | ೧,೦೦೦ |
| ೨೭೨೦. | ಶ್ರೀ ಗಿರಿಯಪ್ಪ<br>ಬಂಡಮ್ಮನಹಳ್ಳಿ | ೫೦೦ |
| ೨೭೨೧. | ಶ್ರೀ ಜಿ.ಸಿ. ಶಿವಣ್ಣ<br>ಬೆಂಗಳೂರು | ೫೦೦ |
| ೨೭೨೨. | ಶ್ರೀ ಸಿ.ಎಸ್. ಲೋಕೇಶ್<br>ಚಿಕ್ಕಹಳ್ಳಿ | ೧೦,೦೦೦ |
| ೨೭೨೩. | ಶ್ರೀ ಎಸ್. ಶಾಂತಯ್ಯ<br>ಕಂಬಾಳು | ೧,೦೦೦ |
| ೨೭೨೪. | ಶ್ರೀ ಬಸಣ್ಣಗೌಡ<br>ಮದರೆ | ೨,೦೦೦ |
| ೨೭೨೫. | ಶ್ರೀ ಎಲ್. ದೊರೆಸ್ವಾಮಿ<br>ಕೊಳ್ಳೇಗಾಲ | ೨,೦೦೦ |
| ೨೭೨೬. | ಶ್ರೀ ಸದಾನಂದ<br>ಬೆಂಗಳೂರು | ೧,೦೦೦ |
| ೨೭೨೭. | ಶ್ರೀ ಬಿ. ಚನ್ನಬಸವಣ್ಣ<br>ಮದಕರಿನಾಯಕನಕೋಟೆ | ೨,೦೦೦ |
| ೨೭೨೮. | ಶ್ರೀಮತಿ ಬಿ. ಗಿರಿಜಮ್ಮ ಬಿ ಚನ್ನಬಸವೇಗೌಡ<br>ಅಡಗೂರು | ೧೦,೫೫೫ |
| ೨೭೨೯. | ಶ್ರೀ ಹೆಚ್.ಎಸ್ ಕುಮಾರಸ್ವಾಮಿ<br>ತುಮಕೂರು | ೨೨,೨೨೨ |
| ೨೭೩೦. | ಶ್ರೀ ಎಂ. ಯೋಗೇಂದ್ರಮಹಾಸ್ವಾಮಿ<br>ಮುಳ್ಳೂರು | ೧,೦೦೦ |
| ೨೭೩೧. | ಶ್ರೀ ಪುಟ್ಟಲಿಂಗಯ್ಯ<br>ತುಮಕೂರು | ೨,೦೦೦ |
| ೨೭೩೨. | ಶ್ರೀ ಎಂ. ವಜ್ಜೀರಯ್ಯ<br>ಬಳ್ಳಾರಿ | ೫,೦೫೧ |
| ೨೭೩೩. | ಶ್ರೀ ಎ.ಜಿ. ಕೆಂಪರಾಜು<br>ಬೆಂಗಳೂರು | ೫೦೧ |
| ೨೭೩೪. | ಶ್ರೀ ಎಂ.ಎನ್. ಮುನಿಯಪ್ಪಗೌಡ<br>ತಿಪಟೂರು | ೨,೦೦೦ |
| ೨೭೩೫. | ಶ್ರೀ ಹೆಚ್.ಸಿ. ಕುಮಾರಪ್ಪ<br>ಹಿರೇನಲ್ಲೂರು | ೧,೦೦೦ |
| ೨೭೩೬. | ಶ್ರೀ ಬಿ.ಎಂ. ಗುರುಮೂರ್ತಿಸ್ವಾಮಿ<br>ಶ್ರೀಧರಗದ್ದೆ | ೨,೦೦೦ |

(ಮುಂದುವರೆಯುತ್ತದೆ)

"Siddaganga" Monthly - Postal Reg. No. L2/RNP/385/TMR/2018-20
Posted at RMS, Tumkur-572 102
R[illegible]o. 17139/69



To

LM -5944
Prakash, Teacher,
#7/10, 6th Cross, 2nd Main,
Govindaraja Nagara,
**Bengaluru -560040**



If undelivered please return to :
Editor
Siddaganga Monthly Magazine
Siddaganga Math
Tumkur-572 104

Cover printed at : Geetanjali Graphics, 6-71, KSSIDC Indl. Area, 6th Block, Rajajinagar, Bengaluru-10, Ph : 23404232
email ID : geetanjaligraphics@gmail.com